ಹಾಗೂ ಕಾರ್ಯಯೋಜನೆಗಳನ್ನು ಸ್ಪಷ್ಟಪಡಿಸಿವೆ. ಕೆಲವು ಮುಖ್ಯ ಪ್ರಶ್ನೆಗಳು ಮತ್ತು ಅವುಗಳಿಗೆ ಅವರು ನೀಡಿದ ಉತ್ತರಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಮತಾಂತರದ ಪಿಡುಗಿನ ಬಗ್ಗೆ ಜಾಗರಣ ಪ್ರಕಾಶನವು ಒಟ್ಟು ಎರಡು ಹೊತ್ತಿಗೆಗಳನ್ನು ಹೊರಡಿಸಿದಂತಾಯಿತು. ಸಮಾಜಬಾಂಧವರಲ್ಲಿ ಕರ್ತವ್ಯ ಪ್ರಜ್ಞೆಯನ್ನು ಜಾಗೃತಗೊಳಿಸಲು ಇವು ಸಮರ್ಥವಾಗಿದ್ದಲ್ಲಿ ನಮ್ಮ ಶ್ರಮ ಸಾರ್ಥಕ ಎಂದು ಭಾವಿಸುತ್ತೇವೆ. ಈ ಕಾರ್ಯದಲ್ಲಿ ನೆರವಾದ ಸರ್ವರಿಗೂ ನಾವು ಆಭಾರಿ.

ಬೆಂಗಳೂರು — ಪ್ರಕಾಶಕರು
೩೦ – ೮ – ೮೧

ಬೆಲೆ : ೦–೭೫

ರಾಷ್ಟ್ರೋತ್ಥಾನ ಮುದ್ರಣಾಲಯ
ಬೆಂಗಳೂರು – ೫೬೦ ೦೧೯

# ಮತಾಂತರ - ಒಂದು ಸವಾಲು

**ಪ್ರಶ್ನೆ :** ತಮಿಳುನಾಡಿನ ಮೀನಾಕ್ಷಿಪುರದಲ್ಲಿ ಹರಿಜನ ಹಿಂದುಗಳು ಸಾಮೂಹಿಕವಾಗಿ ಇಸ್ಲಾಮಿಗೆ ಮತಾಂತರಗೊಳ್ಳುವಂತಾದುದೇಕೆ ?

## ಮತಾಂತರದ ಕಾರಣಗಳು

**ಉತ್ತರ :** ತಮಿಳುನಾಡಿನ ಸಾಮೂಹಿಕ ಮತಾಂತರಕ್ಕೆ ಮುಖ್ಯವಾಗಿ ಮೂರು ಕಾರಣಗಳಿವೆ. ಮೊದಲನೆಯದಾಗಿ – ಅಲ್ಲಿ ಹಿಂದುಗಳಲ್ಲಿನ ಧಾರ್ಮಿಕ ಶ್ರದ್ಧೆಯನ್ನು ನಾಶಮಾಡುವ ಚಳವಳಿಯೊಂದು ಕಳೆದ ೬೦–೭೦ವರ್ಷ ಗಳಿಂದ ಸತತವಾಗಿ ನಡೆಯುತ್ತಿದೆ. ಶ್ರೀ ಇ. ವಿ. ರಾಮಸ್ವಾಮಿ ನಾಯಕರ್ ಅವರು ಪ್ರಾರಂಭಿಸಿದ 'ವಿಚಾರವಾದಿಗಳ ಚಳವಳಿ'ಯ ಉದ್ದೇಶಗಳೇನೋ ಸ್ತುತ್ಯವಾಗಿಯೇ ಇದ್ದವು. ಉದಾ : ಹಿಂದು ಸಮಾಜದಲ್ಲಿದ್ದ ಅಸಮಾನತೆ ಗಳು, ಅನಿಷ್ಟರೂಢಿಗಳನ್ನು ಅಳಿಸುವುದು ಇತ್ಯಾದಿ. ಆದರೆ ಈ ಅನಿಷ್ಟ ಸಂಗತಿಗಳು ಹಿಂದು ಧರ್ಮದ ಅವಿಭಾಜ್ಯ ಅಂಗವೆಂದು ತಪ್ಪಾಗಿ ಗ್ರಹಿಸಿದ ಕಾರಣ ಬರುಬರುತ್ತಾ ಈ ಚಳವಳಿಯಲ್ಲಿ ವಿಕೃತಿ ನುಸುಳಿತು. ಶ್ರೀ ನಾಯಕರ್ ಅವರ ಪ್ರೇರಣೆಯಿಂದ ಜನಿಸಿ ಪ್ರಭಾವಗಳಿಸಿದ ಡಿ.ಕೆ., ಡಿ.ಎಂ.ಕೆ., ಮುಂತಾದ ಸಾಮಾಜಿಕ–ರಾಜಕೀಯ ಸಂಘಟನೆಗಳ ವಿಚಾರಗಳು ಬರಬರುತ್ತಾ ಬ್ರಾಹ್ಮಣ ದ್ವೇಷ, ಸಂಸ್ಕೃತ–ಹಿಂದಿ ದ್ವೇಷ, ಔತ್ತರೇಯರ ದ್ವೇಷಗಳ ರೂಪ ತಾಳಿದವು. ಕೊನೆಗೆ ಅವುಗಳ ಅನುಯಾಯಿಗಳು ಹಿಂದು ಶ್ರದ್ಧಾಬಿಂದುಗಳಾದ ಶ್ರೀರಾಮ ಶ್ರೀ ಕೃಷ್ಣರ ಚಿತ್ರಗಳಿಗೆ ಚಪ್ಪಲಿಗಳಿಂದ ಹೊಡೆದು ಸಾರ್ವಜನಿಕವಾಗಿ ಅಪಮಾನಿಸಿದರು. ಭಗವದ್ಗೀತೆಯನ್ನು ಸುಟ್ಟುಹಾಕಿದರು. ಗಣಪತಿ ವಿಗ್ರಹ ಗಳ ನಾಶ ಮಾಡಿದರು. ಉತ್ತರದವರೆಂಬ ಕಾರಣ ಗಾಂಧಿಜೀ-ನೆಹರೂ ಅವರ ಪ್ರತಿಮೆಗಳಿಗೂ ಅವಮಾನ ತಪ್ಪಲಿಲ್ಲ. ಈ ಎಲ್ಲ ಅವಿಚಾರ ಕೃತ್ಯಗಳಿಂದಾಗಿ ಸಮಾಜದ ಕೆಲಜನರಲ್ಲಿ ಧರ್ಮಶ್ರದ್ಧೆ ಹಾರಿಹೋಯಿತು.

## ಅಲುಗಾಡಿದ ಧರ್ಮಶ್ರದ್ಧೆ

ಮನುಷ್ಯ ತಾನು ಬದುಕಲು ಹೊಟ್ಟೆಗಿಷ್ಟು ಆಹಾರ ಸಿಕ್ಕಿದರಷ್ಟೇ ಆಗುವುದಿಲ್ಲ. ಅವನಿಗೆ ಮನಸ್ಸು, ಹೃದಯ ಹಾಗೂ ಆತ್ಮಗಳಿವೆ. ಹೊಟ್ಟೆಯ

ಹಸಿವು ತಣಿಸಲು ಆಹಾರ ಹೇಗೆ ಬೇಕೋ ಹಾಗೆಯೇ ಹೃದಯ, ಆತ್ಮಗಳ ಹಸಿವುಣಿಸಲು ಶ್ರದ್ಧೆಯೂ ಬೇಕು. ಶ್ರದ್ಧೆ ಪ್ರಬಲವಾಗಿದ್ದಾಗ ಎಂಥ ಆಸೆ ಆಮಿಷಗಳಿಗೂ ಆತ ಬಗ್ಗಲಾರ. ಉದಾಹರಣೆಗೆ ನೋಡಿ. ಹಿಂದೆ ಸುಮಾರು ೮೦೦ ವರ್ಷಗಳ ಕಾಲ ನಮ್ಮ ದೇಶದಲ್ಲಿ ಮುಸಲ್ಮಾನ ರಾಜ್ಯವಿತ್ತು. ಔರಂಗಜೇಬನಂಥ ಮತಾಂಧ ಚಕ್ರವರ್ತಿ ಇಲ್ಲಿ ಆಳುತ್ತಿದ್ದ ದಿನಗಳಿದ್ದವು. ಇಂದು ಆಸೆ, ಆಮಿಷಗಳನ್ನು ತೋರಿ ಹಿಂದುಗಳನ್ನು ಮತಾಂತರಿಸಲು ಅರಬ್ ದೇಶಗಳಿಂದ ಹಣ ಬರುತ್ತದೆ ಎಂದು ಜನ ಹೇಳುತ್ತಿದ್ದಾರೆ. ಆದರೆ ಅಂದು ಔರಂಗಜೇಬನ ಬಳಿ ಇದ್ದ ಹಣದ ಮುಂದೆ ಇಂದಿನದು ನಗಣ್ಯ ಪ್ರಮಾಣದ್ದು. ಸಾಲದ್ದಕ್ಕೆ ರಾಜ್ಯಾಡಳಿತ ಯಂತ್ರದ ಮೂಲಕ ಆಸೆ, ಆಮಿಷ, ಬಲಾತ್ಕಾರ ಮುಂತಾದ ಎಲ್ಲ ತಂತ್ರಗಳನ್ನು ಬಳಸಿ ಹಿಂದುಗಳನ್ನು ಮತಾಂತರಿಸುವ ಹುಚ್ಚು ಆವೇಶವೂ ಆತನಲ್ಲಿತ್ತು. ಇಷ್ಟಾದರೂ ಆತ ಆಳಿದ ದೆಹಲಿಯಲ್ಲೇ, ಅದರ ನೆರೆಯಲ್ಲಿನ ಇಂದಿನ ಉತ್ತರ ಪ್ರದೇಶದಲ್ಲೇ ಶೇ. ೮೫-೯೦ ಮಂದಿ ಜನರು ಹಿಂದುಗಳಾಗಿಯೇ ಉಳಿದರು. ಕಾರಣವೇನು ? ಮನದಾಳಕ್ಕೆ ಮುಟ್ಟಿದ್ದ ಧರ್ಮಶ್ರದ್ಧೆ. ಗುರುಗೋವಿಂದಸಿಂಹನ ಮಕ್ಕಳ ಉದಾಹರಣೆಯೇ ಇದೆಯಲ್ಲ ! ಎಳೆವಯಸ್ಸಿನ ಆ ಹುಡುಗರನ್ನು ಮತಾತರಗೊಳ್ಳಲು ಬಲಾತ್ಕರಿಸಲಾಯಿತು. ಸುತ್ತಲೂ ಗೋಡೆಕಟ್ಟಿ ಒಳಗೆ ಉಸಿರುಕಟ್ಟಿಸಿ ಸಾಯಿಸುವ ಸಂದರ್ಭದಲ್ಲೂ ಮುಸಲ್ಮಾನರಾಗುತ್ತೀರಾ ? ಎಂದು ಕೇಳಿದಾಗ ಅವರು ಸ್ಪಷ್ಟವಾಗಿ ನಿರಾಕರಿಸಿಬಿಟ್ಟರು. ಹಿಂದುಗಳಾಗಿಯೇ ಸತ್ತು ವೀರ ಸ್ವರ್ಗಪಡೆದರು.

ಇಂದು ತಮಿಳುನಾಡಿನಲ್ಲಿ ಮುಸಲ್ಮಾನರ ಆಳ್ವಿಕೆ ಇಲ್ಲ. ಆದರೂ ಕೆಲವು ಜನ ಆ ಮತಕ್ಕೆ ಆಕರ್ಷಿತರಾಗುತ್ತಿರುವುದಕ್ಕೆ ಅತಿಮುಖ್ಯಕಾರಣ ಕ್ಷೀಣ ವಾದ ಧರ್ಮಶ್ರದ್ಧೆಯೇ ಎಂಬುದರಲ್ಲಿ ಸಂದೇಹವಿಲ್ಲ. ಜನಮನದಲ್ಲಿದ್ದ ಶ್ರದ್ಧೆಯೊಂದನ್ನು ನಾಶಗೊಳಿಸುವ ಪ್ರಯತ್ನವೇನೋ ನಡೆಯಿತು. ಆದರೆ ಅದಕ್ಕಿಂತಲೂ ಶ್ರೇಷ್ಠವೂ ಉದಾತ್ತವೂ ಆದ ಬದಲಿ ಆದರ್ಶವೊಂದನ್ನು ಜನಮನದಲ್ಲಿ ಬೇರೂರಿಸುವ ಕೆಲಸ ಮಾತ್ರ ಆಗಲಿಲ್ಲ. ಇದರಿಂದ ಶೂನ್ಯ ವೊಂದು ನಿರ್ಮಾಣವಾಗಿದೆ. ಪ್ರಕೃತಿ ಶೂನ್ಯವನ್ನು ಸಹಿಸದು. ಬೇರಾವು ದಾದರೊಂದು ವಿಷಯ ಅದನ್ನು ತುಂಬಲೇಬೇಕು. ಇಸ್ಲಾಮಿಗೆ ಸದ್ಯದ ಈ ಸ್ಥಿತಿ ವರದಾನದಂತಿದೆ. ಮುಸಲ್ಮಾನರು ಭಾರತವನ್ನು ಇಸ್ಲಾಂಮಯ

ಗೊಳಿಸುವ ಇಚ್ಛೆಯು ಪ್ರಯೋಗಕ್ಷೇತ್ರವಾಗಿ ತಮಿಳುನಾಡನ್ನು ಆರಿಸಲು ಇದೇ ಕಾರಣ. ನಾವೇ, ನಮ್ಮ ಜನರೇ ಪ್ರಶಸ್ತಗೊಳಿಸಿದ ಹಾದಿಯಲ್ಲಿ ಸುಲಭ ವಿಜಯಗಳಿಸಲು ಅವರೀಗ ಮುಂದಾಗಿದ್ದಾರೆ. ದ್ರಾವಿಡ ಕಜಗಂನ ಕಾರ್ಯಕರ್ತರಲ್ಲೇ ಅನೇಕರು ಈಗ ಮತಾಂತರದ ದಲ್ಲಾಳಿಗಳಾಗಿ ಕೆಲಸ ಮಾಡುತ್ತಿದ್ದಾರೆ ಎನ್ನುವ ಅಂಶ ಇದಕ್ಕೆ ಪುಷ್ಟಿ ನೀಡಿದೆ.

**ಅಸಹ್ಯ ಅಸಮಾನತೆ**

ಹರಿಜನ ಹಿಂದುಗಳು ಮತಾಂತರಗೊಳ್ಳುತ್ತಿರುವುದಕ್ಕೆ ಇಷ್ಟೇ ಮಹತ್ವದ ಇನ್ನೊಂದು ಕಾರಣ – ಶತಶತಮಾನಗಳಿಂದ ನಮ್ಮಲ್ಲಿ ಆಚರಣೆಯಲ್ಲಿರುವ ಸಾಮಾಜಿಕ ಅಸಮಾನತೆ. ತುಂಬಾ ಅಸಹ್ಯವೂ, ಅಪಮಾನಕರವೂ, ನಮ್ಮ ಧರ್ಮದ ಉದಾತ್ತ ಬೋಧನೆಗಳಿಗೆ ವಿರುದ್ಧವೂ, ಮೂರ್ಖತನದ್ದೂ ಆದ ಸಂಗತಿ ಇದು. ಹರಿಜನ ಹಿಂದುವಾಗಿ ಹುಟ್ಟಿ ನಮ್ಮಂತೆಯೇ ರಾಮ ಕೃಷ್ಣ ರನ್ನು ಪೂಜಿಸುವ ಮಾಧವ ತಾನು 'ಮಾಧವ'ನಾಗಿರುವವರೆಗೆ ಅವನಿಗೆ ನಮ್ಮ ಮನೆಯಲ್ಲಿ ಪ್ರವೇಶವಿಲ್ಲ, ಅದೇ ಮತಾಂತರಗೊಂಡು ಮಹಮದ್ ಆಗಿಯೋ, ಮಾರ್ಟಿನ್ ಆಗಿಯೋ ಹೆಸರು ಬದಲಿಸಿ ಬಂದರೆ ಅದೇ ವ್ಯಕ್ತಿಗೆ ಮನೆಗೆ ಪ್ರವೇಶವೂ ದೊರಕುತ್ತದೆ. ಕಾಫಿಯ ಉಪಚಾರವೂ ಸಿಗುತ್ತದೆ. ಇದಕ್ಕಿಂತಲೂ ಮೂರ್ಖತನದ ವ್ಯವಹಾರ ಜಗತ್ತಿನಲ್ಲಿ ಯಾವುದಾದರೂ ಇದೆಯೇ? ಭಗವಂತನ ಸೃಷ್ಟಿಯಲ್ಲಿರುವ ಎಲ್ಲದಕ್ಕೂ ಎಲ್ಲರಿಗೂ ಸಮಾನ ಅಧಿಕಾರವಿದೆ. ಪೂಜ್ಯ ವಿನೋಬಾಜಿ 'ಸಬ್ ಭೂಮಿ ಗೋಪಾಲ್ ಕೀ' (ಎಲ್ಲ ಭೂಮಿಯೂ ಭಗವಂತನದು) ಎಂದಿದ್ದರು. ಸಮಾನತೆಯ ದೃಷ್ಟಿ ನಮ್ಮಲ್ಲಿ ಅರಳಲಿ ಎಂಬುದೇ ಅದರ ಆಶಯ. ಅಂದ ಮೇಲೆ ಬಾವಿ, ಕೆರೆ ನದಿ ಮುಂತಾದ ಸಮಸ್ತ ಜಲಾಶಯಗಳ ಮೇಲೆ ಸರ್ವರಿಗೂ ಸಮಾನ ಅಧಿಕಾರವಿರಬೇಕು. ಆದರೆ ನಾವು ಮಾತ್ರ ಈ 'ಮಾಧವ'ನಿಗೆ ನಮ್ಮ ಬಾವಿಗಳಿಗೆ ಬರಗೊಡುವುದಿಲ್ಲ. ಆತ ಕೆರೆ ನದಿಗಳನ್ನು ಬಳಸಲು ನಿರ್ಬಂಧ ವಿದೆ. ಎಷ್ಟು ಅಮಾನವೀಯ ಈ ಸಂಗತಿ! ಪರಮಾತ್ಮ ಎಲ್ಲರ ಜನ್ಮದಾತ, ಎಲ್ಲರಿಗೂ ಆತನದು ಸಮಾನ ಸ್ವೀಕಾರ. ಆದರೆ ಆತನ ಮಂದಿರಗಳಿಗೆ 'ಮಾಧವ' ಬರುವಂತಿಲ್ಲ. ಆತನನ್ನು 'ಮಾಧವ' ಪೂಜಿಸುವಂತಿಲ್ಲ. ಹೋಟೆಲು-ಶಾಲೆ ಮುಂತಾದ ಸಾರ್ವಜನಿಕ ತಾಣಗಳಲ್ಲೂ ಅಷ್ಟೇ ಮನ

ಚುಚ್ಚುವ ವ್ಯವಹಾರ. ಹೋಟೆಲುಗಳಲ್ಲಿ ನಾವು ಕುಡಿಯುವ ಲೋಟಗಳಲ್ಲೇ ಮಹಮದ್, ಮಾರ್ಟಿನ್ ಇಬ್ಬರೂ ಕುಡಿಯಬಹುದು. ಆದರೆ ಈ 'ಮಾಧವ'ನಿಗೆ ಮಾತ್ರ ಆ ಅವಕಾಶವಿಲ್ಲ. ಆತನಿಗೆ ಬೇರೆಯದೇ ಲೋಟ.' ಹಬ್ಬಹರಿದಿನಗಳ ಆಚರಣೆಯ ಸಂದರ್ಭದಲ್ಲೂ ಅಷ್ಟೇ. ನಾವು ನಲಿಯು ವಾಗ ನಮ್ಮ ಬಂಧು-ಮಿತ್ರರನ್ನು ನಾವು ನೆನಪಿಸಿ ಕರೆಯುತ್ತೇವೆ. ಆದರೆ ನಮ್ಮ ನೆನಪಿನ ಪಟ್ಟಿಯಲ್ಲಿ ತಪ್ಪಿಯಾದರೂ ಈ 'ಮಾಧವ' ಅಥವಾ ಆತನ ಪತ್ನಿಯ ಹೆಸರು ಸೇರಿಕೊಳ್ಳುವುದಿಲ್ಲ. ಹೀಗೆ ಸರ್ವಸಂದರ್ಭದಲ್ಲೂ ನಮ್ಮದು ಅಸಹ್ಯ ಅಸಮಾನತೆಯ ವ್ಯವಹಾರ. ಕಲ್ಲಿನಲ್ಲೂ ಆತ್ಮವನ್ನು ಕಾಣಲು ಕಲಿಸಿ ಕೊಟ್ಟ ಸಂಸ್ಕೃತಿಯ ಮಕ್ಕಳಾದ ನಾವು ನಮ್ಮ ಈ ಹಿಂದು ಬಂಧುಗಳಲ್ಲಿರುವ ಆತ್ಮವನ್ನು ಗುರುತಿಸದಾಗಿದ್ದೇವೆ. ಅವರೊಡನೆ ಪಶುಗಳಿಗೂ ಕಡೆಯಾಗಿ ವ್ಯವಹರಿಸಿ ಅವರ ಮನಸ್ಸನ್ನು ರೊಚ್ಚಿಗೆಬ್ಬಿಸಿದ್ದೇವೆ. ಹರಿಜನ ಹಿಂದುಗಳು ಮತಾಂತರಗೊಳ್ಳುತ್ತಿರುವುದರ ಮುಖ್ಯ ಕಾರಣಗಳಲ್ಲಿ ಇದೂ ಒಂದು.

**ಮೂರನೇ ಕಾರಣ, ದಟ್ಟದಾರಿದ್ರ್ಯ**

ಹರಿಜನ ಹಿಂದು ಬಾಂಧವರು ಮತಾಂತರ ಹೊಂದುತ್ತಿರುವುದಕ್ಕೆ ಮೂರನೆಯ ಕಾರಣ ಅವರ ದಟ್ಟದಾರಿದ್ರ್ಯ. ಇದೇ ಪ್ರಮುಖ ಕಾರಣ ಎಂದು ಕೆಲವರು ಹೇಳುತ್ತಾರೆ. ಆದರೆ ನಾನು ಹೀಗೆ ಹೇಳಲಾರೆ. ಏಕೆಂದರೆ ಅದರಲ್ಲಿ ಒಂದಿಷ್ಟು ತಥ್ಯವಿದ್ದರೂ ಅದು ಪೂರ್ತಿ ನಿಜ ಅಲ್ಲ. ಕಡುಬಡವ ರಾದ ಹರಿಜನ ಬಂಧುಗಳಿಗೆ ಹಣ, ಬಟ್ಟೆಬರೆ, ಅರಬ್ ರಾಷ್ಟ್ರಗಳಲ್ಲಿ ಕೈತುಂಬಾ ಸಂಬಳ ತರುವ ಉದ್ಯೋಗಾವಕಾಶ ಮುಂತಾದ ನಾನಾ ಆಮಿಷ ಗಳನ್ನೊಡ್ಡಿ ಮತಾಂತರಿಸಲು ಯೋಜನೆಯೊಂದು ಅರಬ್ ದೇಶಗಳಲ್ಲಿ ತಯಾರಾಗಿದೆ ಎನ್ನಲು ಈಗ ಕೆಲವು ಸ್ಪಷ್ಟ ಆಧಾರಗಳಿವೆ. ತಮಿಳುನಾಡನ್ನೇ ಈ ಪ್ರಯೋಗಕೇಂದ್ರವಾಗಿ ಏಕೆ ಆರಿಸಿಕೊಂಡಿದ್ದಾರೆಂಬುದು ಈಗಾಗಲೇ ಸ್ಪಷ್ಟಪಟ್ಟಿದೆ. ಇದರ ಪರಿಣಾಮ ಕೆಲವರಾದರೂ ಹರಿಜನ ಬಂಧುಗಳ ಮೇಲೆ ಆಗಿರುವ ಸಂಭವ ಇದ್ದೇ ಇದೆ. ಆದರೆ ತಮಿಳುನಾಡಿನಲ್ಲಿ ಧನವಂತರೂ, ವಿದ್ಯಾವಂತರೂ ಆದ ಅನೇಕ ಹರಿಜನ ಬಂಧುಗಳು ಇಸ್ಲಾಮಿಗೆ ಸೇರಿದ್ದಾರೆ. ಕೊನೆಯ ಪಕ್ಷ, ಈ ಸಂದರ್ಭಗಳಲ್ಲಂತೂ ಮತಾಂತರದ ಕಾರಣ ಬಡತನ ಅಲ್ಲ ವಲ್ಲ! ಮತ್ತು ಕೇವಲ ಹರಿಜನ ಬಂಧುಗಳಿಗೆ ಮಾತ್ರ ಈ ಬಡತನವು ಸೀಮಿತ ವಾದದ್ದೇ? ಇತರ ಜನವರ್ಗಗಳಲ್ಲೂ ಬಡವರಿಲ್ಲವೇ? ಅವರೇಕೆ ಮತಾಂತರ

ಗೊಳ್ಳುತ್ತಿಲ್ಲ ? ಆದ್ದರಿಂದ ದಾರಿದ್ರ್ಯವನ್ನು ಮತಾಂತರದ ಪ್ರಮುಖ ಕಾರಣವಾಗಿ ಪರಿಗಣಿಸಬಾರದು. ನನಗನಿಸುವಂತೆ ಕ್ಷೀಣಿಸಿದ ಧರ್ಮಶ್ರದ್ಧೆ ಹಾಗೂ ಅಸಹ್ಯ ಅಸಮಾನತೆಯ ಆಚರಣೆ – ಇವೇ ಪ್ರಮುಖ ಕಾರಣಗಳು. ಅವುಗಳೆರಡೂ ನಿರ್ಮಿಸಿದ ವಿಶಿಷ್ಟ ಪರಿಸ್ಥಿತಿಯಲ್ಲಿ ಈ ಆರ್ಥಿಕ ಕಾರಣಕ್ಕೂ ಒಂದು ಮಹತ್ವ ಬಂದಿದೆ, ಅಷ್ಟೇ.

ಪ್ರಶ್ನೆ : ಮತಾಂತರದ ಈ ಘೋರ ಸಮಸ್ಯೆಗೆ ಸೂಕ್ತ ಪರಿಹಾರವೇನೆಂಬುದನ್ನು ತಿಳಿಸಬಲ್ಲಿರಾ ?

**ಪರಿಹಾರ ಇಲ್ಲಿದೆ**

ಉತ್ತರ : ಕಾಯಿಲೆಯ ಕಾರಣ ತಿಳಿದ ಮೇಲೆ ಚಿಕಿತ್ಸೆ ಕಷ್ಟವೇ ? ಮತಾಂತರಕ್ಕೆ ಕಾರಣವಾಗಿರುವ ಈ ಮೂರು ಸಂಗತಿಗಳನ್ನು ನಿವಾರಿಸುವುದೇ ಅದಕ್ಕೆ ಸೂಚಿಸಬಹುದಾದ ಸೂಕ್ತ ಪರಿಹಾರ.

ಮೊದಲನೆಯದಾಗಿ, ಕ್ಷೀಣಿಸಿರುವ ಧರ್ಮಶ್ರದ್ಧೆಯನ್ನು ನಾವು ಎಚ್ಚರಿಸಬೇಕು. ಇದಕ್ಕಾಗಿ ಮಠಾಧಿಪತಿಗಳು ಸಾಧುಸಂತರು ನಮ್ಮ ಸಮಾಜದ ಎಲ್ಲರ ಬಳಿಗೆ ಹೋಗಬೇಕು. ಪ್ರತಿಯೊಂದು ಕುಗ್ರಾಮಕ್ಕೂ, ಪ್ರತಿಯೊಂದು ಗುಡಿಸಿಲಿಗೂ ಮುಟ್ಟಿ ಧರ್ಮಜಾಗೃತಿಯ ಕಹಳೆಯನ್ನು ಅವರು ಮೊಳಗಿಸಬೇಕು. ತಮ್ಮ ಮಠಗಳಿಗೋ ಆಶ್ರಮಗಳಿಗೋ ಜನರು ಬರಲಿ, ಅಲ್ಲೇ ಅವರಿಗೆ ಧರ್ಮೋಪದೇಶ ನೀಡುತ್ತವೆ ಎಂದುಕೊಳ್ಳುವ ಕಾಲ ಇದಲ್ಲ. ಅವುಗಳಿಂದ ಹೊರಬಂದು ನಮ್ಮ ಧರ್ಮದ ಉದಾತ್ತ ಮೌಲ್ಯಗಳನ್ನು ಜನಸಾಮಾನ್ಯರಿಗೆ ತಿಳಿಯ ಹೇಳಬೇಕು. ರಾಮಾಯಣ, ಮಹಾಭಾರತದ ಕಥೆಗಳು, ನಮ್ಮ ಸಹಸ್ರಾರು ಶ್ರೇಷ್ಠ ಪುರುಷರ ಚರಿತ್ರೆಗಳನ್ನು ಹೇಳಿ ಜನರ ಮನದಲ್ಲಿ ಸ್ವಧರ್ಮಾಭಿಮಾನವು ದೃಢಗೊಳ್ಳುವಂತೆ ಮಾಡಬೇಕು. ಇದರ ಜೊತೆ ಜೊತೆಗೇ ನಮ್ಮ ಧರ್ಮದ ಮೇಲೆ ಆಕ್ರಮಣ ನಡೆಸಲು ಹೊರಟಿರುವ ಅನ್ಯ ಧರ್ಮಗಳ ಲೋಪದೋಷಗಳನ್ನು ಜನರಿಗೆ ತಿಳಿಯಪಡಿಸಲೂ ಬೇಕು. ಇದರಿಂದಲೂ ಹೋಲಿಕೆಯಲ್ಲಿ ನಮ್ಮ ಧರ್ಮವೇ ಶ್ರೇಷ್ಠ ಎಂಬ ಅರಿವು, ತನ್ನ ಹಿಂದುತ್ವದ ಕುರಿತಾದ ನಿಷ್ಠೆ, ಜನರಲ್ಲಿ ಇನ್ನಷ್ಟು ಆಳವಾಗುತ್ತದೆ. ಇದು ಮೊದಲ ಪರಿಹಾರ.

ಸಾಮಾಜಿಕ ಅಸಮಾನತೆಯನ್ನೂ ಸಂಪೂರ್ಣವಾಗಿ ತೊಡೆದು ಹಾಕಬೇಕು. ಅದಕ್ಕಾಗಿ ನಮ್ಮ ಮನೆಗಳನ್ನೂ, ನಮ್ಮ ಬಾವಿ, ಕೆರೆ, ನದಿಗಳನ್ನೂ,

ದೇವಮಂದಿರಗಳನ್ನೂ ನಮ್ಮವನೇ ಆದ 'ಮಾಧವ'ನಿಗೆ ನಾವು ತೆರೆದಿಡ ಬೇಕು. ಸಾರ್ವಜನಿಕ ಸ್ಥಳಗಳಲ್ಲಿ ವ್ಯವಹರಿಸುವಾಗ ಅಸಮಾನತೆಯು ಲವ ಲೇಶವೂ ಇರಬಾರದು. ಹಬ್ಬ ಹರಿದಿನಗಳಲ್ಲಿ ನಮ್ಮ ಬಂಧು-ಮಿತ್ರರನ್ನು ಕರೆಯುವಂತೆ 'ಮಾಧವ'ನನ್ನೂ ಆತನ ಹೆಂಡತಿ ಮಕ್ಕಳನ್ನೂ ನಮ್ಮ ಮನೆಗೆ ಕರೆಯಬೇಕು. ನಾವೂ ಅವನ ಮನೆಗೆ ಹೋಗಬೇಕು. ಇವೆಲ್ಲವನ್ನು ಮಾಡು ವುದರಿಂದ ಸಾಮಾಜಿಕ ಅಸಮಾನತೆ ಅಳಿದು ಏಕತೆ ನಿರ್ಮಾಣವಾಗುತ್ತದೆ.

ಹರಿಜನ ಹಿಂದು ಬಂಧುಗಳ ದಾರಿದ್ರ್ಯ ನಿವಾರಣೆಯ ಬಗ್ಗೆಯೂ ನಾವು ಪ್ರಯತ್ನಿಸಬೇಕು. ಇಂದು ಕೇಂದ್ರ ಹಾಗೂ ಎಲ್ಲ ರಾಜ್ಯ ಸರ್ಕಾರಗಳೂ ಹರಿಜನ ಬಂಧುಗಳ ದಾರಿದ್ರ್ಯ ನಿವಾರಣೆಗೆ ಬಗೆ ಬಗೆಯ ಯೋಜನೆಗಳ ನ್ನೇನೋ ರೂಪಿಸಿವೆ. ಆದರೆ ಇದುವರೆಗಿನ ಅನುಭವದಂತೆ ಸರಕಾರಿ ಯಂತ್ರ ದಲ್ಲೇ ಬಹು ಪಾಲು ಹಣ ಸೋರಿ ಹೋಗುವುದರಿಂದ ಕಟ್ಟಕಡೆಯ ವ್ಯಕ್ತಿಗೆ ಕವಡೆಯಷ್ಟೂ ಸಿಗುತ್ತಿಲ್ಲ. ನಾವು ಎಚ್ಚರವಹಿಸಿ ಆ ಹಣದ ಪ್ರತಿಯೊಂದು ಚಿಕ್ಕಾಸೂ ಅರ್ಹ ವ್ಯಕ್ತಿಗಳಿಗೇ ಹೋಗುವಂತೆ ನೋಡಿಕೊಳ್ಳಬೇಕು. ನಮ್ಮ ಶಕ್ತಿ ಇರುವಷ್ಟು ಪ್ರಮಾಣದಲ್ಲಿ ನಾವೂ ಸಣ್ಣಸಣ್ಣ ಯೋಜನೆಗಳನ್ನು ತಯಾರಿಸಿಕೊಂಡು ಅವುಗಳ ಮೂಲಕವೂ ಈ ಉಪೇಕ್ಷಿತ ಬಂಧುಗಳಿಗೆ ನೆರವು ನೀಡಬೇಕು.

**ಪ್ರಶ್ನೆ :** ಮತಾಂತರದ ಸಮಸ್ಯೆಯ ಪರಿಹಾರಕ್ಕೆ ಸಂಘವು ಪ್ರತ್ಯಕ್ಷ ವಾಗಿ ಏನು ಮಾಡಲಿದೆ ?

**ಅಸ್ಪೃಶ್ಯತಾ ನಿರ್ಮೂಲನಕ್ಕಾಗಿ ಸಂಘದ ಆಂದೋಲನ**

**ಉತ್ತರ :** ಆಗಲೇ ಮೂರು ಪರಿಹಾರಗಳನ್ನು ಹೇಳಿದೆನಲ್ಲ. ಕೇವಲ ಹೇಳುವ ಸಲುವಾಗಿ ಅಲ್ಲ, ಪ್ರತ್ಯಕ್ಷ ಅವನ್ನು ನಾವು ಮಾಡುತ್ತಿರುವುದರಿಂದಲೇ ಹೇಳಿದ್ದೇನೆ. ನಮ್ಮ ಅ. ಭಾ. ಕಾರ್ಯಕಾರಿ ಮಂಡಳಿಯ ನಿರ್ಣಯದಂತೆ ಕಳೆದ ಆಗಸ್ಟ್ ೧೫ರ 'ರಕ್ಷಾ ಬಂಧನ' ದಿನದಿಂದ ನಾವು ದೇಶಾದ್ಯಂತ ಒಂದು ಅಭಿಯಾನವನ್ನು ನಡೆಸಿದ್ದೇವೆ. ನಮ್ಮ ಲಕ್ಷಾವಧಿ ಕಾರ್ಯಕರ್ತರು ಗ್ರಾಮ ಗ್ರಾಮಗಳಿಗೆ ಮನೆ ಮನೆಗಳಿಗೆ ಹೋಗಿ ಅಲ್ಲಿನ ಹಿಂದು ಬಾಂಧವರಿಗೆ ರಕ್ಷೆ ಕಟ್ಟುತ್ತಿದ್ದಾರೆ. ಜೊತೆಗೆ ಹಿಂದು ಭ್ರಾತೃತ್ವದ ಸಂದೇಶವನ್ನು ನಮ್ಮೆಲ್ಲ ಬಾಂಧವರಿಗೆ, ವಿಶೇಷವಾಗಿ ಈ ಉಪೇಕ್ಷಿತ ಹರಿಜನ ಬಂಧುಗಳಿಗೆ, ನೀಡು ತ್ತಿದ್ದಾರೆ. ಈ ಉಪೇಕ್ಷಿತ ಬಂಧುಗಳು ವಾಸಿಸುವ ಕೇರಿಗಳಿಗೆ ಧಾರ್ಮಿಕ

ಮಠಾಧೀಶರು, ಸಾಧು-ಸಂತರ ಪಾದಯಾತ್ರೆಗಳನ್ನು ಏರ್ಪಡಿಸುವುದರ ಮೂಲಕ ಅವರಲ್ಲಿ ಧಾರ್ಮಿಕ ಶ್ರದ್ಧೆಯನ್ನು ಎಚ್ಚರಿಸಲಿದ್ದಾರೆ. ಬರುವ ಅಕ್ಟೋಬರ್ ತಿಂಗಳವರೆಗೂ ಈ ಅಸ್ಪೃಶ್ಯತಾ ನಿರ್ಮೂಲನದ ಕುರಿತಾಗಿ ವಿವಿಧ ರೀತಿಯ ಪ್ರಯತ್ನಗಳಿಂದ ಜನಜಾಗರಣ ಮಾಡಲು ಸಂಕಲ್ಪಿಸಿದ್ದೇವೆ. ಮುಂದೆಯೂ ಅಷ್ಟೇ, ಈ ಉಪೇಕ್ಷಿತ ಬಂಧುಗಳಿಗೆ ನೆರವಾಗುವ 'ಮಾಹಿತಿ ಕೇಂದ್ರ'ಗಳನ್ನು ಸ್ಥಾಪಿಸಿ ಅವುಗಳ ಮೂಲಕ ಅವರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಪರಿಹರಿಸುವ ಯತ್ನವನ್ನೂ ಮಾಡುವವರಿದ್ದೇವೆ.

**ಪ್ರಶ್ನೆ:** ಸಂಘವು ಕೈಗೊಂಡಿರುವ ಈ ಅಭಿಯಾನವು ಇಂದು ಮೀನಾಕ್ಷಿಪುರದಲ್ಲಿ ನಡೆದಿರುವ ಮತಾಂತರಕ್ಕೆ ಒಂದು ಪ್ರತಿಕ್ರಿಯೆಯಂತೆ (Reaction) ತೋರುತ್ತಿದೆ. ಶಾಶ್ವತ ಫಲ ನೀಡುವ ರಚನಾತ್ಮಕ ಕಾರ್ಯಕ್ರಮವೇನಾದರೂ ಸಂಘದ ಬಳಿ ಇದೆಯೆ ?

### ಅಸ್ಪೃಶ್ಯತಾ ನಿವಾರಣೆಗೆ ಸಂಘದ ರಚನಾತ್ಮಕ ಕಾರ್ಯಕ್ರಮ

**ಉತ್ತರ:** ಅಸ್ಪೃಶ್ಯತೆಯ ಪಿಡುಗನ್ನು ನಿವಾರಿಸುವ ಸಂಘದ ಪ್ರಯತ್ನ ಮೀನಾಕ್ಷಿಪುರದ ಘಟನೆಯ ನಂತರ ಪ್ರಾರಂಭವಾಗಿದ್ದಿದ್ದರೆ ಅದೊಂದು 'ಪ್ರತಿಕ್ರಿಯೆ' ಎಂಬ ಮಾತು ನಿಜವಾಗುತ್ತಿತ್ತು. ಆದರೆ ಸಂಘದ ಪ್ರಯತ್ನವು ೧೯೨೫ರಲ್ಲಿ ಅದು ಹುಟ್ಟಿದ ದಿನವೇ, 'ಹಿಂದುಗಳೆಲ್ಲರೂ ಒಂದು, ಹಿಂದುಗಳೆಲ್ಲರೂ ಬಂಧು' ಎಂದು ಘೋಷಿಸಿದಾಗಲೇ ಪ್ರಾರಂಭವಾಯಿತು. ಮತ್ತು ಸಂಘದ ಈ ಘೋಷಣೆ ಕೇವಲ ಘೋಷಣೆಯಷ್ಟೇ ಆಗಲಿಲ್ಲ, ಸಾಧನೆಯೂ ಆಯಿತು. ೧೯೩೪ರಲ್ಲಿ ವರ್ಧಾದಲ್ಲಿ ನಡೆದ ಸಂಘದ ಶಿಬಿರಕ್ಕೆ ಭೇಟಿ ನೀಡಿದ ಮಹಾತ್ಮಾ ಗಾಂಧಿಜೀ ಅವರಿಗೆ ಸ್ವಯಂಸೇವಕರು (ಅದರಲ್ಲಿ ನೂರಾರು ಹರಿಜನರೂ ಇದ್ದರು) ಅಸಮಾನತೆಯ ಲವಲೇಶವೂ ಇಲ್ಲದೇ ಬೆರೆತು ನಡೆದುಕೊಳ್ಳುವುದನ್ನು ಕಂಡು ಆಶ್ಚರ್ಯವೂ, ಆನಂದವೂ ಆಗಿತ್ತು. ಈ ಯಶಸ್ಸಿನ ಗುಟ್ಟೇನು ಎಂದು ಅವರು ಸಂಘದ ಸಂಸ್ಥಾಪಕರಾದ ಡಾ॥ ಹೆಡಗೇವಾರ್‌ರವರ ಬಳಿ ಕೇಳಿಯೂ ಇದ್ದರು. ಇದೇ ಬಗೆಯ ಅನುಭವ ಪೂನಾದಲ್ಲಿ ನಡೆದ ಶಿಬಿರವೊಂದಕ್ಕೆ ಭೇಟಿ ನೀಡಿದ್ದಾಗ ಅಂಬೇಡ್ಕರ್ ಅವರಿಗೂ ಆಯಿತು. ಈ ಸಂದರ್ಭದಲ್ಲಿ ಅವರು ಸ್ವಯಂಸೇವಕರನ್ನೂ, ಸಂಘವನ್ನೂ ಮುಕ್ತಕಂಠದಿಂದ ಪ್ರಶಂಸಿಸಿದ್ದರು. ಹೀಗೆ ಸಂಘದ ಕೆಲಸವು ಪ್ರಾರಂಭದಿಂದಲೂ ರಚನಾತ್ಮಕವಾಗಿದೆ ಮತ್ತು ಅದಕ್ಕೆ

ಯಶಸ್ಸೂ ಸಿಕ್ಕಿದೆ. ಮೀನಾಕ್ಷಿಪುರದ ಘಟನೆ ಏನಿದ್ದರೂ ಇದಕ್ಕೊಂದು ಹೆಚ್ಚಿನ ಚಾಲನೆ ಅಷ್ಟೇ.

**ಪ್ರಶ್ನೆ :** ಅನೇಕ ವರ್ಷಗಳಿಂದ ಈಸಾಯಿಗಳೂ ಹಿಂದುಗಳನ್ನು ಮತಾಂತರಿಸುತ್ತಿದ್ದಾರೆ. ಈಗ ಮುಸಲ್ಮಾನರೂ ಸಾಮೂಹಿಕ ಮತಾಂತರಕ್ಕೆ ಕೈಹಾಕಿದರು ಅಷ್ಟೇ. ಅದನ್ನೊಂದು ದೊಡ್ಡ ಸಂಗತಿ ಎಂದು ಪರಿಗಣಿಸಿ ಸಂಘವು ಈಗ ಗಾಬರಿಪಟ್ಟಿರುವುದೇಕೆ ?

**'ಇದು ಅಂತರರಾಷ್ಟ್ರೀಯ ಸಂಚು'**

**ಉತ್ತರ :** ಮೀನಾಕ್ಷಿಪುರದ ಘಟನೆಯಿಂದ ನಮಗೆ ತೀವ್ರ ಚಿಂತೆ ಉಂಟಾಗಿದ್ದರೂ ಗಾಬರಿ ಮಾತ್ರ ಆಗಿಲ್ಲ. ಮತ್ತು ಈವರೆಗೆ ನಾವು ಈಸಾಯೀ ಚಟುವಟಿಕೆಗಳನ್ನು ನಿರ್ಲಕ್ಷಿಸಿದ್ದೇವೆ ಎಂಬುದೂ ನಿಜವಲ್ಲ. ವಿಶ್ವಹಿಂದು ಪರಿಷತ್ತು, ಕಲ್ಯಾಣಾಶ್ರಮ ಮುಂತಾದ ಅನೇಕ ಹಿಂದು ಧಾರ್ಮಿಕ–ಸಾಮಾಜಿಕ ಸಂಸ್ಥೆಗಳಲ್ಲಿ ಸಕ್ರಿಯರಾಗಿರುವ ನಮ್ಮ ಸ್ವಯಂ ಸೇವಕರು ಈ ಚಟುವಟಿಕೆಗಳ ಪ್ರಭಾವವನ್ನು ತಗ್ಗಿಸಲು ಪ್ರಯತ್ನಿಸಿಯೂ ಇದ್ದಾರೆ. ತಕ್ಕ ಮಟ್ಟಿಗೆ ಸಫಲರೂ ಆಗಿದ್ದಾರೆ. ಆದರೆ ಈಗ ಮೀನಾಕ್ಷಿಪುರ ದಲ್ಲಿ ನಡೆದಿರುವ ಮತಾಂತರ ಒಂದು ವ್ಯಾಪಕ ಅಂತರರಾಷ್ಟ್ರೀಯ ಸಂಚಿನ ಅಂಗ. ಕುವೈಟ್ ದೇಶದ 'ಅರಬ್ ಟೈಂಸ್' ಪತ್ರಿಕೆಯು ಹಿಂದುಸ್ಥಾನದಲ್ಲಿ ಹರಿಜನ ಹಿಂದುಗಳನ್ನು ಮತಾಂತರಿಸಲು ಧನಸಹಾಯ ನೀಡುವ ಅರಬ್ ದೇಶಗಳ ನಿರ್ಧಾರದ ಸುದ್ದಿಯನ್ನು ಪ್ರಕಟಿಸಿದೆ. ಈಚೆಗೆ ಹೈದರಾಬಾದಿನಲ್ಲಿ ನಡೆದ ಜಮಾತ್–ಏ–ಇಸ್ಲಾಮಿ ಸಮ್ಮೇಳನದಲ್ಲಿ ಮುಂಬರುವ ೧೦ ವರ್ಷ ಗಳಲ್ಲಿ ಭಾರತವನ್ನು ಇಸ್ಲಾಮುಯಗೊಳಿಸುವ ಕರೆಯನ್ನು ನೀಡಲಾಗಿದೆ. ಈ ಬಗೆಯ ಸಮ್ಮೇಳನಗಳು ದೇಶದಲ್ಲಿ ಸುಮಾರು ೨೦ ಕಡೆಗಳಲ್ಲಿ ನಡದಿವೆ. ಕೊನೆಯ ಪಕ್ಷ ೮ ಕೋಟಿ ಹರಿಜನರನ್ನು ಅರಬ್ ಹಣದ ನೆರವಿನಿಂದ ಮತಾಂತರಿಸಿದಲ್ಲಿ ಇಲ್ಲಿ ಮುಸ್ಲಿಂರಾಜ್ಯ ತರಲು ಸಾಧ್ಯ ಎಂಬ ಕನಸು ಕಾಣ ಲಾಗುತ್ತಿದೆ. ಆದ್ದರಿಂದ ಮೀನಾಕ್ಷಿಪುರದ ಘಟನೆಗೆ ನಾವೀಗ ಆದ್ಯತೆ ಕೊಟ್ಟಿ ದ್ದೇವೆ, ಅಷ್ಟೇ. ಇದರರ್ಥ ಈಸಾಯಿಗಳು ನಡೆಸುವ ಮತಾಂತರಗಳನ್ನು ನಾವು ಕಣ್ಮುಚ್ಚಿ ಸಹಿಸುತ್ತೇವೆ ಎಂದು ಎಂದಿಗೂ ಆಗದು.

**ಪ್ರಶ್ನೆ :** ಮತಾಂತರದಲ್ಲಿ ವಿದೇಶೀ ಹಣದ ಪಾತ್ರವಿದೆ ಎಂಬ ಶಂಕೆಯ ಬಗ್ಗೆ. ಅದು ನಿಜವಾಗಿದ್ದರೆ ಸರ್ಕಾರವೇಕೆ ಸುಮ್ಮನಿದೆ ? ಅದನ್ನು ಪರಿಶೀಲಿಸಿ ತಡೆಯುವ ಸಾಮರ್ಥ್ಯ ಅದಕ್ಕಿದೆಯಲ್ಲ ?

**ರಾಜಕಾರಣಿಗಳ ಅಂಜಿಕೆ**

ಉತ್ತರ : ಸರ್ಕಾರದ ಸಾಮರ್ಥ್ಯದ ಬಗ್ಗೆ ಸಂದೇಹವೆಲ್ಲಿದೆ ? ಆದರೆ ಮನಸ್ಸು ಬೇಕಷ್ಟೇ. ಮತಾಂತರದಲ್ಲಿ ವಿದೇಶೀ ಹಣದ ಪಾತ್ರವಿದೆ ಎಂಬ ಶಂಕೆಯನ್ನು ಸ್ವತಃ ಕೇಂದ್ರ ಗೃಹಮಂತ್ರಿಗಳೇ ವ್ಯಕ್ತಪಡಿಸಿದ್ದಾರೆ. ಅಂದ ಮೇಲೆ ಈ ಬಗ್ಗೆ ಸಾಕಷ್ಟು ಆಧಾರ ಇರಬಹುದಲ್ಲವೇ ? ಆದರೆ ದುರದೃಷ್ಟ. ಮುಸಲ್ಮಾನರ ಪ್ರಶ್ನೆ ಬಂದಾಗಲೆಲ್ಲ ಸರ್ಕಾರ ಅಂಜಿ ನಡೆಯುತ್ತದೆ ಎಂಬ ಭಾವನೆ ಇಂದು ಸಾರ್ವತ್ರಿಕವಾಗಿ ಬೆಳೆದಿದೆ. ಇದಕ್ಕೆ ಕಾರಣವೂ ಇಲ್ಲದಿಲ್ಲ. ಸರ್ಕಾರವನ್ನು ನಡೆಸುವವರು ರಾಜಕಾರಣಿಗಳು. ಅಧಿಕಾರದ ಗದ್ದುಗೆ ಯೇರಲು ಅವರಿಗೆ ಮುಸಲ್ಮಾನರ ಸಮೂಹ ಮತಗಳು ಬೇಕು. ನಾನೊಬ್ಬ ಹಿರಿಯ ರಾಜಕಾರಣಿಗೆ "ನೀವೇಕೆ ಈ ಬಗ್ಗೆ ಪ್ರಯತ್ನಿಸಬಾರದು ?" ಎಂದು ಕೇಳಿದಾಗ ಅವರು ನನಗೆ ನೇರವಾಗಿ "ಇದು ನಮ್ಮ ಕೆಲಸವಲ್ಲ. ಹಿಂದು ಸಾಮಾಜಿಕ ಸಂಘಟನೆಗಳವರದು" ಎಂದುಬಿಟ್ಟರು. "ಹಾಗಿದ್ದರೆ ರಾಷ್ಟ್ರರಕ್ಷಣೆಗೆ ಸಂಬಂಧಿಸಿದ ಈ ಪ್ರಶ್ನೆಯ ಬಗ್ಗೆ ನಿಮಗೆ ಯಾವ ಕರ್ತವ್ಯವೂ ಇಲ್ಲವೆನ್ನುತ್ತೀರಾ?" ಎಂದು ನಾನೂ ಅವರನ್ನು ಕೇಳಬೇಕಾಯಿತು. ಒಟ್ಟಿನಲ್ಲಿ ಮುಸಲ್ಮಾನರ ಮತಗಳು ಗಿಟ್ಟುವುದಿಲ್ಲ ಎನ್ನಿಸಿರುವುದರಿಂದ ಈ ಬಗ್ಗೆ ಬಿಗಿಯಾದ ಕ್ರಮಗಳನ್ನು ಕೈಗೊಳ್ಳಲು ನಮ್ಮ ರಾಜಕಾರಣಿಗಳು ಅಂಜುತ್ತಾರೆಂದು ಹೇಳಬಹುದು.

ಪ್ರಶ್ನೆ : ಹರಿಜನ ಬಂಧುಗಳು ಸಾಮಾಜಿಕ ಅಸಮಾನತೆಯಿಂದ ಸಾವಿರಾರು ವರ್ಷ ನೊಂದಿದ್ದಾರೆ. ಅವರ ಬಗ್ಗೆ ಹಿಂದೆಂದೂ ಇಲ್ಲದಿದ್ದ ಕಳವಳ ಈಗ ಅವರು ಇಸ್ಲಾಂಗೆ ಮತಾಂತರಗೊಳ್ಳುವ ಬೆದರಿಕೆ ಹಾಕಿದೊಡನೆ ತಟ್ಟನೆ ಹುಟ್ಟಿತಲ್ಲವೆ ?

**ಮತಾಂತರದ ಬಗ್ಗೆ ಕಳವಳ ಏಕೆ ?**

ಉತ್ತರ : ಹರಿಜನರ ಬವಣೆಯ ಬಗ್ಗೆ ಇದುವರೆಗೆ ಕಳವಳವಿರಲಿಲ್ಲ ಎಂಬ ಮಾತೇ ಸರಿಯಲ್ಲ. ದಲಿತೋದ್ಧಾರದ ಪ್ರಯತ್ನ ನಮ್ಮ ದೇಶದಲ್ಲಿ ಇಂದು ನೆನ್ನೆಯದಲ್ಲ. ಅದಕ್ಕೊಂದು ಸುದೀರ್ಘ ಇತಿಹಾಸವಿದೆ. ತಮಿಳು ನಾಡಿನ ನಾಯನ್ಮಾರರು, ಆಳ್ವಾರರು, ರಾಮಾನುಜಾಚಾರ್ಯರು, ಕೇರಳದ ನಾರಾಯಣ ಗುರು, ಕರ್ನಾಟಕದಲ್ಲಿ ಕನಕದಾಸರು, ಬಸವೇಶ್ವರರು, ಮಹಾರಾಷ್ಟ್ರದ ತುಕಾರಾಂ, ಏಕನಾಥ್ ಮತ್ತಿತರ ವಾರಕರಿ ಪಂಥದವರು ;

ಉತ್ತರದ ಪಂಜಾಬಿನ ಗುರು ನಾನಕದೇವ, ಉತ್ತರ ಪ್ರದೇಶದ ತುಳಸಿ ದಾಸರು, ಅಸ್ಸಾಂನ ಶಂಕರದೇವ ಮುಂತಾದ ಎಷ್ಟೋ ಸಂತರು, ಭಕ್ತಿ ಪಂಥದ ಸಾಹಿತಿಗಳು ಈ ಚಳುವಳಿಗೆ ಪ್ರೇರಣೆ ನೀಡಿದ್ದಾರೆ. ಈಚಿನ ದಿನ ಗಳಲ್ಲೂ ಅಷ್ಟೇ. ರಾಜಾರಾಂ ಮೋಹನರಾಯ್, ರಾಮಕೃಷ್ಣ ಪರಮ ಹಂಸರು, ವಿವೇಕಾನಂದರು, ದಯಾನಂದ ಮಹರ್ಷಿ, ಗಾಂಧಿಜೀ, ಸಾವರ್ಕರ್ ಠಕ್ಕರ್ ಬಾಪಾರಂಥ ಅನೇಕ ಧಾರ್ಮಿಕ–ಸಾಮಾಜಿಕ ಮುಖಂಡರು ಈ ಪಿಡುಗಿನ ನಿರ್ಮೂಲನಕ್ಕಾಗಿ ತಮ್ಮ ತಮ್ಮದೇ ವಿಧಾನಗಳಿಂದ ಪ್ರಾಮಾಣಿಕವಾಗಿ ಶ್ರಮಿಸಿದ್ದಾರೆ. ಆದ್ದರಿಂದ ದಲಿತೋದ್ಧಾರದ ಕಳಕಳಿ ನಮ್ಮ ಸಮಾಜ ಸುಧಾರಕರಲ್ಲಿ ಮೊದಲಿನಿಂದಲೂ ಇದೆ. ಆದರೆ ಮೀನಾಕ್ಷಿಪುರದ ಮತಾಂತರ ದಿಂದ ಸಮಾಜದ ಶ್ರೀಸಾಮಾನ್ಯರು ಕಣ್ತೆರೆಯುವಂತಾಗಿದೆ ಅಷ್ಟೇ. ಏಕೆಂದರೆ ಹಿಂದೆ ಶಂಕರಾಚಾರ್ಯರು ಮಂಡನ ಮಿಶ್ರರೊಡನೆ ವಾದಿಸಿ ಗೆದ್ದು ಅವರನ್ನು ಪರಿವರ್ತಿಸಿದ ರೀತಿಯದಲ್ಲ ಈಗಿನ ಮತಾಂತರ. ರಾಷ್ಟ್ರೀಯ ಜೀವನ ಪ್ರವಾಹದಿಂದ ಮತಾಂತರ ಹೊಂದಿದವರನ್ನು ಸಂಪೂರ್ಣವಾಗಿ ಬೇರ್ಪಡಿಸು ವಂಥದು ಎಂಬುದನ್ನು ಗಮನಿಸಬೇಕು.ದೇಶದ ಮೇಲಿನ ಅವರ ಭಕ್ತಿ ಅಳಿದು ವಿದೇಶೀ ನಿಷ್ಠೆಗಳು ಮೂಡಲು ಇದು ನೆರವಾಗುತ್ತದೆ. ಉದಾಹರಣೆಗೆ ಮೀನಾಕ್ಷಿಪುರದಲ್ಲಿ ಮತಾಂತರ ನಡೆದ ನಂತರ ಪ್ರತ್ಯಕ್ಷ ವಿಷಯಗಳನ್ನು ಅರಿ ಯಲು ಅಲ್ಲಿಗೆ ಹೋದ ಯು. ಎನ್. ಐ. ವರದಿಗಾರನೊಬ್ಬನ ಅನುಭವ ಇದು. ವರದಿಗಾರ ಒಬ್ಬ ೯-೧೦ ವರ್ಷದ ಬಾಲಕನನ್ನು ಮಾತನಾಡಿಸಲೆಂದು ಬಳಿಗೆ ಹೋದಾಗ ಆ ಬಾಲಕ ಅಭ್ಯಾಸ ಬಲದಿಂದ 'ವಣಕ್ಕಂ' (ನಮಸ್ಕಾರ) ಎಂದ. ಆದರೆ ಬಳಿಯಲ್ಲಿ ನಿಂತಿದ್ದ ಹಿರಿಯನೊಬ್ಬ ಆತನ ತಲೆ ಕುಟ್ಟಿ "ವಣಕ್ಕಂ ಅಲ್ಲ ಸಲಾಂ ಆಲೈಕುಂ ಎಂದು ಹೇಳು" ಎಂದು ತಿದ್ದಿದ. ನಿನ್ನ ಹೆಸರೇನು ಎಂದು ವರದಿಗಾರ ಕೇಳಿದಾಗ ತಿರುಗಿ ಅಭ್ಯಾಸ ಬಲದಿಂದ ಆ ಬಾಲಕ 'ಶಿವಲಿಂಗಂ' ಎಂದ. ಅದಕ್ಕೂ ತಲೆ ಕುಟ್ಟಿದ ಆ ಹಿರಿಯ ಶಿವಲಿಂಗಂ ಅಲ್ಲ 'ಮಹಮದ್ ಘಜ್ನಿ' ಎಂದು ನೆನಪಿಸಿದ. ಶಿವಲಿಂಗಂಗೆ 'ಮಹಮ್ಮದ್ ಘಜ್ನಿ'ಯ ಹೆಸರಿಟ್ಟಿರುವುದರ ಒಳಅರ್ಥ ನಿಮಗೆ ಆಗಿರ ಬಹುದು. ಆದ್ದರಿಂದಲೇ ಸಾವರ್ಕರ್ ಈ ಮತಾಂತರಗಳನ್ನು ಕೇವಲ ಪೂಜಾಪದ್ಧತಿಯ ಬದಲಾವಣೆಯಷ್ಟೇ ಅಲ್ಲವೆಂದೂ ನಿಜಕ್ಕೂ ಅವುಗಳಿಂದ ರಾಷ್ಟ್ರಾಂತರವೇ ಆಗುವುದೆಂದೂ ಹೇಳಿದ್ದರು. ಮತಾಂತರಿಗಳು ದೇಶದ

ಶತ್ರುಪಾಳಯಕ್ಕೆ ಸೇರಿಕೊಳ್ಳುವುದರಿಂದ ಸಹಜವಾಗಿ ಈ ಮತಾಂತರಗಳ ಬಗ್ಗೆ ಈಗ ಹೆಚ್ಚಿನ ಕಳವಳ ವ್ಯಕ್ತವಾಗಿದೆ. ಈವರೆಗೆ ಕೇವಲ ಹಿಂದು ಸಮಾಜದ ಆಂತರಿಕ ಪ್ರಶ್ನೆಯಾಗಿದ್ದುದು ಈಗ ರಾಷ್ಟ್ರೀಯ ಗಂಡಾಂತರದ ರೂಪ ತಾಳಹೊರಟಿರುವುದರಿಂದ ಸಮಾಜಕ್ಕೆ ಜ್ಞಾನೋದಯವಾಗಿದೆ.

**ಪ್ರಶ್ನೆ :** ಹಿಂದು ಸಮಾಜದಲ್ಲಿ ಇಲ್ಲದ ಸಾಮಾಜಿಕ ಸಮತೆಯನ್ನು ಅರಸಿಕೊಂಡು ಹರಿಜನ ಬಂಧುಗಳು ಇಸ್ಲಾಮಿನತ್ತ ಹೋದಲ್ಲಿ ತಪ್ಪೇನು ?

**ಮುಸಲ್ಮಾನರ ಸಾಮಾಜಿಕ ಸಮತೆ – ಒಂದು ಭ್ರಮೆ**

**ಉತ್ತರ :** ಹಿಂದು ಸಮಾಜದಲ್ಲಿಲ್ಲದ ಸಮತೆ-ಸೋದರತೆಗಳು ಮುಸಲ್ಮಾನರಲ್ಲಿವೆ ಎಂಬುದು ಕೇವಲ ಭ್ರಮೆ ಅಷ್ಟೇ. ಅದು ನಿಜವಾಗಿದ್ದಲ್ಲಿ ಶಿಯಾ-ಸುನ್ನಿ ಪಂಥಗಳ ಜನರು ಕಾದಾಡಿ ಪರಸ್ಪರರನ್ನು ಸಾಯಿಸುವುದೇಕೆ ? ಪಾಕಿಸ್ತಾನದಲ್ಲಿ ಅಹ್ಮದೀಯಾ ಪಂಗಡದವರನ್ನು 'ನೀವು ಮುಸಲ್ಮಾನರೇ ಅಲ್ಲ' ಎಂದು ತಿರಸ್ಕರಿಸಿ, ಅವರಿಗೆ ಪ್ರಾಥಮಿಕ ಪೌರತ್ವದ ಹಕ್ಕುಗಳನ್ನು ನಿರಾಕರಿಸಿ ಹಿಂಸಿಸುವುದೇಕೆ ? ಇರಾನ್‌ನಲ್ಲಿ ಅಯಾತುಲ್ಲಾ ಖೊಮೇನಿಯ ವಿರುದ್ಧ ಚಕಾರವೆತ್ತಿದರೂ ಪ್ರಾಣದಂಡ ತೆರಬೇಕಾದ ಸ್ಥಿತಿ ಯಾವ ಸೋದರತೆಯ ಲಕ್ಷಣ ? ಮುಖ್ಯವಾಗಿ, ಸಾಮಾಜಿಕ ಸಮತೆ ಗಂಡಿನಂತೆ ಹೆಣ್ಣಿಗೂ ಲಭಿಸಬೇಕಲ್ಲವೇ ? ಆದರೆ ಹೆಣ್ಣಿಗೆ ಆತ್ಮವಿಲ್ಲವೆಂಬ, ಆಕೆ ಮಸೀದಿಯಲ್ಲಿ ಪೂಜಿಸುವಂತಿಲ್ಲವೆಂಬ ನಂಬಿಕೆ ಗಂಡಿನಲ್ಲಿ ಪ್ರಚಲಿತವಾಗಿರುವುದು ಸಮಾನತೆಯೆ ? ಅರಬ್ಬೀ ಮುಸ್ಲಿಮರು ಮುಂಬೈ, ಹೈದರಾಬಾದ್‌ಗಳಿಗೆ ಬಂದು ಎಳೆಯ ಮುಸಲ್ಮಾನ ಹೆಣ್ಣು ಮಕ್ಕಳನ್ನು ಅನುಭವಿಸಿ ನಂತರ ಅವರಿಗೆ ತಲಾಕ್ (ವಿವಾಹ ವಿಚ್ಛೇದ) ಹೇಳಿ ಬೀದಿಗೆಸೆದು ಹೋಗುತ್ತಾರೆ. ಹೆಣ್ಣು ಗಂಡಿನ ಭೋಗವಸ್ತು ಅಷ್ಟೇ ಎಂಬ ಕಲ್ಪನೆಯಿಂದ ಗಂಡಿಗೆ ಸುಲಭವಾಗಿರುವ, ಆದರೆ ಹೆಣ್ಣನ್ನು ಅಸಹಾಯಕ ಸ್ಥಿತಿಗೆ ಇಳಿಸಿರುವ 'ತಲಾಕ್' ವಿಧಿ ಯಾವ ಸಮತೆಯ ರೀತಿ ? ಮೀನಾಕ್ಷಿಪುರದಲ್ಲಿ ಹೊಸದಾಗಿ ಮತಾಂತರ ಹೊಂದಿದವರಿಗೆ ಮಸೀದಿಗಳಲ್ಲಿ ಉಳಿದ ಮುಸ್ಲಿಮರೊಡನೆ ಪ್ರಾರ್ಥಿಸಲು ಅವಕಾಶ ನೀಡಲಿಲ್ಲವೆಂಬ ವರದಿ ಬಂದಿದೆ. ಅಂತೆಯೇ ಮತಾಂತರಗೊಂಡ ಹೆಂಗಸರು ಸ್ನಾನಮಾಡಲು ಒಂದು ಕೊಳಕ್ಕೆ ಹೋದಾಗ ಅಲ್ಲಿದ್ದ ಮುಸ್ಲಿಂ ಹೆಂಗಸರು 'ಅಸ್ಪೃಶ್ಯರು ಬಂದರು' ಎಂದು ಮೂದಲಿಸಿ ಮನೆಗೆ ಹೊರಟರಂತೆ. ಇಸ್ಲಾಂನ 'ಸಮಾನತೆ'ಯ ಘೋಷಣೆ ಕೇವಲ ಒಂದು ಭ್ರಮೆ ಎಂಬುದು

ಸ್ಪಷ್ಟ. ಆದ್ದರಿಂದಲೇ ಹಿಂದು ಸಮಾಜದ ಮೇಲಿನ ರೋಷದಿಂದ ಮುಸಲ್ಮಾನರಾಗುವುದು 'ಬಾಣಲೆಯಿಂದ ತಪ್ಪಿಸಿಕೊಂಡು ಬೆಂಕಿಗೆ ಬಿದ್ದಂತೆ ಆದೀತು' ಎಂದು ಅನೇಕ ಹರಿಜನ ಹಿಂದು ಮುಖಂಡರೂ ದಲಿತೋದ್ಧಾರದಲ್ಲಿ ಕಳಕಳಿಯುಳ್ಳ ಹರಿಜನೇತರ ಹಿಂದುಗಳೂ ಹೇಳುತ್ತಿದ್ದಾರೆ.

**ಪ್ರಶ್ನೆ :** ಸರ್ಕಾರದಿಂದ ಸೌಲಭ್ಯ ಗಿಟ್ಟಿಸಲು 'ಮತಾಂತರ'ದ ಸೋಗಿರಬಹುದೇ ?

**ಸೋಗಲ್ಲ, ಸತ್ಯ**

**ಉತ್ತರ :** ಸಾವಿರಾರು ವರ್ಷಗಳಿಂದ ಅವರನ್ನು ಸಮಾಜದಿಂದ ದೂರವಿಡಲಾಗಿದೆ. ಈ ಕಾರಣದಿಂದ ಅವರು ಬಗೆಬಗೆಯಾಗಿ ನೊಂದಿದ್ದಾರೆ. ಬವಣೆ ಪಟ್ಟಿದ್ದಾರೆ. ಅವರ ವೇದನೆ ಈಗ ಈ ರೀತಿಯಲ್ಲಿ ಹೊರಹೊಮ್ಮುತ್ತಿದೆ. ಇದನ್ನು ನಾವು ಸಹೃದಯತೆಯಿಂದ ಅರ್ಥಮಾಡಿಕೊಳ್ಳೋಣ. 'ಮತಾಂತರ'ದಿಂದ ತಮಗೆ ಹೆಚ್ಚಿನ ಸೌಲಭ್ಯಗಳು ಸಿಗುವುದಿಲ್ಲವೆಂದು ಅವರಿಗೆ ಗೊತ್ತು. ಇರುವ ಮೀಸಲಾತಿಗಳನ್ನೂ ಅವರು ಕಳೆದುಕೊಳ್ಳಬೇಕಾಗುತ್ತದೆ ಇದೂ ಗೊತ್ತು. ಅವರಿಗೆ ಈಗ ಇರುವ ಹಸಿವು ಆರ್ಥಿಕ ಸೌಲಭ್ಯಗಳದ್ದಲ್ಲ. ಸಾಮಾಜಿಕ ಘನತೆ, ಸಮಾನತೆಗಳದು. ಇದನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಇದನ್ನು 'ಸೋಗು'ದೋ, 'ಬೆದರಿಕೆಯ ತಂತ್ರ'ವೆಂದೋ ಭಾವಿಸುವುದು ಪ್ರಮಾದವಾದೀತು. ಅಲ್ಲದೇ ಅವರು ಕೇಳುತ್ತಿರುವ ಸೌಲಭ್ಯಗಳು ನಲ್ಲಿ, ದೀಪ ಮುಂತಾದ ಪ್ರಾಥಮಿಕ ರೀತಿಯವು. ಸರ್ಕಾರ ಈವರೆಗೆ ಈ ದಿಕ್ಕಿನಲ್ಲಿ ಗಣನೀಯವಾಗಿ ಏನನ್ನೂ ಮಾಡಿಲ್ಲ. ಇದನ್ನು ಪಡೆಯಲು ಅವರು ಪ್ರಯತ್ನಿಸಿದಲ್ಲಿ ತಪ್ಪೇನು ?

**ಪ್ರಶ್ನೆ :** ಮತಾಂತರದ ಬೆದರಿಕೆ ಹಾಕುತ್ತಿರುವ ಹರಿಜನರ ಬಗ್ಗೆ ನಮ್ಮ ನಿಲುವೇನಿರಬೇಕು ?

**ಆತ್ಮೀಯತೆಯಿಂದ ಗೆಲ್ಲೋಣ**

**ಉತ್ತರ :** ಅವರು ಎಷ್ಟೇ ಬೈಗುಳ ಕೊಟ್ಟರೂ ನಾವು ಶಾಂತವಾಗಿರಬೇಕು. ಸಾವಿರಾರು ವರ್ಷಗಳಿಂದ ಅವರು ನೊಂದವರು. ದುಃಖದುಮ್ಮಾನಗಳನ್ನು ಅನುಭವಿಸಿದವರು. ಅವರು ಕೇಳುವ ಪ್ರಶ್ನೆಗಳನ್ನು ಉತ್ತರಿಸುವುದು

ಕಠಿಣ. ನಾವು ಆ ಸ್ಥಿತಿಯಲ್ಲಿದ್ದರೆ, ನಾವೂ ಹಾಗೇ ವರ್ತಿಸುತ್ತಿದ್ದೇವೇನೋ. ಅವರನ್ನು ಪ್ರೀತಿ, ವಿಶ್ವಾಸ, ಆತ್ಮೀಯತೆ, ನೈಜಸೇವೆಗಳಿಂದ ಗೆಲ್ಲುವುದೊಂದೇ ನಮಗಿರುವ ದಾರಿ. ಪೂಜ್ಯ ಪೇಜಾವರ ಶ್ರೀಗಳು ಹರಿಜನ ಕೇರಿಗೆ ಮೊನ್ನೆ ಒಂದು ಕಡೆ ಭೇಟಿ ಕೊಟ್ಟಾಗ ಪ್ರಾರಂಭದಲ್ಲಿ ಅಲ್ಲಿನವರ ಮಾತುಕತೆ ಕೊಂಚ ವ್ಯಗ್ರವಾಗಿದ್ದಂತೆ ಕಂಡುಬಂದರೂ ಸ್ವಾಮೀಜಿಯವರ ಆತ್ಮೀಯ ಸಂಭಾಷಣೆ ಯಿಂದ ಅವರ ವರ್ತನೆಯೇ ಬದಲಾಯಿತು. ಆ ಕೇರಿಯಲ್ಲಿ ಪಾದಯಾತ್ರೆ ಹೊರಟಾಗ ಎಲ್ಲರೂ ಬಂದು ನಮಸ್ಕರಿಸಿ ಆಶೀರ್ವಾದ ಪಡೆದರು.

**ಪ್ರಶ್ನೆ :** ಮತಾಂತರವನ್ನು ತಡೆಗಟ್ಟುವಂತೆ ಸರ್ಕಾರದ ಮೇಲೆ ಏಕೆ ಒತ್ತಡ ತರಬಾರದು ?

**ಸಮಾಜವು ಜಾಗ್ರತವಾದರೆ ಸರ್ಕಾರವೂ ಸುಧಾರಿಸುತ್ತದೆ**

**ಉತ್ತರ :** ಇಂತಹ ಕೆಲಸಗಳಿಗೆ ಸರ್ಕಾರವನ್ನು ಅವಲಂಬಿಸುವುದ ಕ್ಕಿಂತಲೂ ಸಾಮಾಜಿಕ ಜಾಗೃತಿಯಾಗುವಂತೆ ಮಾಡುವುದು ಮುಖ್ಯ. ತಮಿಳುನಾಡಿನಲ್ಲಿ ನಾವು ಈ ಸಮಸ್ಯೆಯ ಬಗ್ಗೆ ಜನಜಾಗೃತಿಯ ಸಲುವಾಗಿ ಪರಿಣಾಮಕಾರಿ ಕಾರ್ಯಕ್ರಮಗಳನ್ನು ಕೈಗೊಂಡಮೇಲೆ ಸರ್ಕಾರವೂ ಜನಭಾವನೆಯನ್ನರಿತು ಕೆಲವು ಸಹಾಯದ ಕ್ರಮಗಳನ್ನು ಕೈಗೊಳ್ಳಲು ಈಗ ಮುಂದಾಗಿದೆ. ಇದುವರೆಗೆ ಹಿಂದುತ್ವ ವಿರೋಧದ ವಾತಾವರಣವಿದ್ದ ಆ ಪ್ರಾಂತದಲ್ಲಿ ಈಗ ಸರ್ಕಾರವೇ ಮಠಾಧಿಪತಿಗಳ ಸಮ್ಮೇಳನ ಕರೆದು ಹಿಂದು ಸಮಾಜದ ಮೇಲೆ ಆಗುತ್ತಿರುವ ಈ ಆಕ್ರಮಣವನ್ನು ತಡೆಗಟ್ಟುವುದು ಹೇಗೆಂದು ಆಲೋಚಿಸಲು ತಯಾರಾಗಿದೆ. ಸರ್ಕಾರದ ವತಿಯಿಂದ ಹರಿಜನರ ಸಂಕಷ್ಟಗಳ ಪರಿಹಾರದ ಹೊಸ ಆವೇಶದ ಪ್ರಯತ್ನ ಪ್ರಾರಂಭ ವಾಗಿದೆ. ದೇವಸ್ಥಾನಗಳಿಗೆ ಪ್ರವೇಶ, ಸಾಮೂಹಿಕ ಭೋಜನ, ವಿವಾಹ, ವಸ್ತ್ರವಿತರಣೆ ಇತ್ಯಾದಿಗಳು ನಡೆದಿವೆ. ಹೀಗೆ ಸಾಮಾಜಿಕ ಜಾಗೃತಿಯುಂಟಾ ದಾಗ ಎಲ್ಲವೂ ತಾನಾಗಿ ಆಗುತ್ತದೆ.

**ಪ್ರಶ್ನೆ :** ಅರಬ್ ದೇಶಗಳಲ್ಲಿ ಮುಸಲ್ಮಾನರನ್ನು ಮತಾಂತರಿಸಲು ಕಾನೂನು ನಿಷೇಧವಿದೆ. ನಮ್ಮಲ್ಲೂ ಅದೇ ಬಗೆಯ ಕಾನೂನು ಏಕೆ ಮಾಡ ಬಾರದು ?

**ಉತ್ತರ :** ಆಮಿಷ, ವಂಚನೆ, ಬಲಾತ್ಕಾರ ಮುಂತಾದ ತಂತ್ರಗಳಿಂದ ಮತಾಂತರಿಸುವುದು ಧರ್ಮವಲ್ಲ, ಅದರ ವಿಡಂಬನೆ. ಅದನ್ನು ಕಾನೂನು

ಮೂಲಕ ನಿಷೇಧಿಸಲೇ ಬೇಕು. ಆದರೆ ಕಾನೂನಿದ್ದ ಮಾತ್ರಕ್ಕೆ ಈ ಕೃತ್ಯಗಳು ನಿಲ್ಲವು. ಸಾಮಾಜಿಕ ಜಾಗೃತಿ ಇರಬೇಕಾದದ್ದು ಅಷ್ಟೇ ಮುಖ್ಯ. ನಮ್ಮ ಸಂಖ್ಯೆ ಕ್ಷೀಣಿಸಿದಲ್ಲಿ ಮುಂದೆ ಅಪಾಯ ತಟ್ಟುತ್ತದೆ ಎಂಬ ಅರಿವು ಸಮಾಜ ದಲ್ಲಿರಬೇಕು ಅಲ್ಲವೆ? ಮೀನಾಕ್ಷಿಪುರದ ಉದಾಹರಣೆಯನ್ನೇ ನೋಡಿ. ಪತ್ರಿಕೆಗಳ ವರದಿಯಂತೆ ಪ್ರತಿದಿನವೂ ಅಲ್ಲಿಗೆ ದೂರದ ಮುಂಬೈ, ದೆಹಲಿ, ಕಾಶ್ಮೀರಗಳಿಂದೆಲ್ಲ ಮುಸಲ್ಮಾನರು ತಂಡೋಪತಂಡವಾಗಿ ಕಾರುಗಳಲ್ಲಿ ಬಂದು ಮತಾಂತರ ಹೊಂದಿದವರನ್ನು ಕಂಡು ಅವರಿಗೆ ಬಟ್ಟೆಬರೆ ಉಡುಗೊರೆ ನೀಡಿ ಹೋಗುತ್ತಿದ್ದಾರೆ. ಆದರೆ ಇಷ್ಟೆಲ್ಲಾ ಆಮಿಷಗಳ ನಡುವೆಯೂ ಗಟ್ಟಿಯಾಗಿ ನಿಂತಿರುವ ಹರಿಜನ ಹಿಂದುಗಳನ್ನು ಮಾತನಾಡಿಸಿ ಬೆನ್ನುತಟ್ಟಿ ಬರಲು ಎಷ್ಟು ಜನ ಹಿಂದುಗಳು ಅಲ್ಲಿಗೆ ಹೋಗುತ್ತಾರೆ ? ಈಚೆಗೆ ಒಬ್ಬ ವಾಣಿಜ್ಯೋದ್ಯಮಿ ನನ್ನನ್ನು ಭೇಟಿಯಾಗಿ ಮೀನಾಕ್ಷಿಪುರದ ಮತಾಂತರಗಳಿಂದ ತನಗೆಷ್ಟು ವ್ಯಥೆ ಆಗಿದೆ ಎಂಬುದನ್ನು ವಿವರಿಸಿದರು. ಮ ತಾ ಂ ತ ರ ಗ ಳ ನ್ನು ತಡೆಯಲು ನನಗೆ ಬಹಳಷ್ಟು ಸಲಹೆಗಳನ್ನು ನೀಡಿದರು. ಆದರೆ “ದೂರದ ಪಂಜಾಬ್ ಇತ್ಯಾದಿ ಕಡೆಗಳಿಂದ ಮುಸ್ಲಿಮರು ಮೀನಾಕ್ಷಿಪುರಕ್ಕೆ ಬಂದು ಹೋಗುತ್ತಿದ್ದಾರೆ. ನೀವು ಅಲ್ಲಿಗೆ ತುಂಬಾ ಹತ್ತಿರ ಇರುವವರು. ನೀವು ಅಲ್ಲಿಗೆ ಹೋಗಿದ್ದಿರಾ ? ಹಿಂದು ಹರಿಜನ ಬಂಧುಗಳನ್ನು ವಿಚಾರಿಸಿಕೊಂಡು ಬಂದಿರಾ?” ಎಂದು ಕೇಳಿದಾಗ “ಇಲ್ಲ” ಎಂದರು. ಸಲಹೆ ಕೊಡಲು ತಯಾರು. ಕೆಲಸ ಮಾಡಲು ಮಾತ್ರ ಹಿಂದೇಟು. ಹೀಗಿದ್ದರೆ ದೇವರೂ ನಮಗೆ ಸಹಾಯ ಮಾಡಲಾರ. ನಾವು ಜಾಗೃತರಾಗಿ ವ್ಯವಹರಿಸುವುದು ಮುಖ್ಯ.

ಪ್ರಶ್ನೆ : ಮತಾಂತರ ಹೊಂದಿರುವ ನಮ್ಮ ಬಂಧುಗಳ ಬಳಿಗೆ ಹೋಗಿ ಅವರ ಮನವೊಲಿಸಿ ತಿರುಗಿ ಅವರನ್ನು ನಮ್ಮೊಳಗೆ ಏಕೆ ಬರಮಾಡಿಕೊಳ್ಳ ಬಾರದು?

### ಪರಾವರ್ತನೆ ನಿಷಿದ್ಧವಲ್ಲ

ಉತ್ತರ : ಅವಶ್ಯವಾಗಿ ಮಾಡಬೇಕು. ಈಚೆಗೆ ಮತಾಂತರ ಹೊಂದಿ ದವರೇ ಏಕೆ, ಹಿಂದೆ ಮತಾಂತರ ಹೊಂದಿದವರನ್ನೂ ಮರಳಿ ಮಾತೃಧರ್ಮಕ್ಕೆ ಆಹ್ವಾನಿಸಬೇಕು. ಮೀನಾಕ್ಷಿಪುರದಲ್ಲಿ ಈ ಪ್ರಯತ್ನವನ್ನು ನಾವು ಮಾಡಿಯೂ ಇದ್ದೇವೆ. ಇದರಿಂದಾಗಿ ಹಲವು ಕುಟುಂಬಗಳು ವಾಪಸು ಬಂದಿವೆ. ಹಾಗೆ ಅವರು ಮರಳಿಬರುವಂತೆ ಪ್ರಯತ್ನಿಸುವುದರೊಂದಿಗೆ ಅವರು ಮರಳಿ ಬಂದಾಗ

ಅವರಿಗೆ ತಿರುಗಿ ಉಪೇಕ್ಷೆಯ ಅನುಭವ ಆಗದಂತೆ ನಾವು ಎಚ್ಚರವಹಿಸಬೇಕು. ಸಾಮಾಜಿಕ ಘನತೆಯು ಸ್ಥಾನಮಾನಗಳು ಅವರಿಗೆ ಸಿಗುತ್ತವೆ ಎಂಬುದನ್ನು ನಿಸ್ಸಂದಿಗ್ಧಗೊಳಿಸಬೇಕು. ಈಚೆಗೆ ರಾಮನಾಥಪುರದಲ್ಲಿ ಸೇರಿದ್ದ ವಿಶಾಲ ಹಿಂದೂ ಐಕ್ಯ ಸಮ್ಮೇಳನದಲ್ಲಿ ಹಾಜರಿದ್ದ ಎಲ್ಲ ಧರ್ಮಾಚಾರ್ಯರೂ ಈ ಆಶ್ವಾಸನೆಯನ್ನು ಕೊಟ್ಟಿದ್ದಾರೆಂಬುದು ಸಮಾಧಾನದ ಸಂಗತಿ. ಅದು ಕಾರ್ಯಗತವಾಗುವಂತೆ ಮಾಡುವುದು ನಮ್ಮ ಜವಾಬ್ದಾರಿ.

**ಪ್ರಶ್ನೆ :** ಕೇವಲ ಸ್ವಾರ್ಥಕ್ಕಾಗಿ, ಹಣದ ಆಸೆಯಿಂದ ಹರಿಜನರು ಮತಾಂತರಗೊಂಡರೆ ಹೋದರೆ ಹೋಗಲಿ ಎಂದು ಸುಮ್ಮನಿರಬಾರದೇಕೆ ?

**ಮತ್ತೆ ದೇಶವಿಭಜನೆ ಆದೀತು !**

**ಉತ್ತರ :** ಮುಸಲ್ಮಾನರಾದರೆ ಒಂದು ಅಪಾಯವಿದೆ. ಹಿಂದೆ ಭಾರತ ವಿಭಜನೆಗೆ ನಮ್ಮ ನಾಯಕರು ಒಪ್ಪಿಗೆ ಕೊಟ್ಟದ್ದು ಸಂಖ್ಯಾತತ್ವದ ಆಧಾರದ ಮೇಲೆ (Theory of Numbers). ಈ ತತ್ವವು ಸಂಘಕ್ಕೆ ಸರ್ವಥಾ ಒಪ್ಪಿಗೆಯಿಲ್ಲ. ಸಂಘದ ಸಂಸ್ಥಾಪಕ ಡಾಕ್ಟರ್ ಹೆಡಗೇವಾರರು ಒಂದು ಉದಾಹರಣೆ ಕೊಡುತ್ತಿದ್ದರು. ಒಂದು ದೊಡ್ಡ ಕುಟುಂಬದಲ್ಲಿ ಏನಾದರೊಂದು ಆಕಸ್ಮಿಕವಾಗಿ ಮನೆ ಮಂದಿಯೆಲ್ಲ ತೀರಿಕೊಂಡು ಒಂದು ಪುಟ್ಟ ಮಗು ಮಾತ್ರ ಉಳಿದುಕೊಂಡಿತೆಂದು ಭಾವಿಸೋಣ. ಆ ಮನೆಯಲ್ಲಿ ಸೇವಕರು ನಾಲ್ಕೈದು ಜನ, ಅತಿಥಿಗಳು ಎಂಟು ಹತ್ತು ಜನ ಮತ್ತು ಪರಿಸ್ಥಿತಿಯ ಲಾಭ ಪಡೆದು ಬಲವಂತವಾಗಿ ಆಕ್ರಮಿಸಿ ಕುಳಿತ ಎಂಟು ಹತ್ತು ಮಂದಿ ಇರುವರೆಂದೂ ಭಾವಿಸೋಣ. ಸಂಖ್ಯಾ ತತ್ವದಂತಾದರೆ ಮನೆ ಆ ಮಗುವಿಗೆ ಸೇರುವುದೇ ಇಲ್ಲ. ಆದರೆ ಜಗತ್ತಿನ ಯಾವ ನ್ಯಾಯಶಾಸ್ತ್ರವೂ ಆ ಮಗುವಿನ ಹಕ್ಕುದಾರಿಕೆಯನ್ನು ಅಲ್ಲಗಳೆಯುವದಿಲ್ಲ. ಏಕೆಂದರೆ ಆ ಮನೆಯ ಪರಂಪರೆಯನ್ನು ಪ್ರತಿನಿಧಿಸುವುದು ಆ ಮಗುವೇ. ಆದರೆ ನಮ್ಮ ನಾಯಕರು ಮಾತ್ರ ದೇಶ ವಿಭಜನೆಯ ಸಂದರ್ಭದಲ್ಲಿ ಈ ಸಂಖ್ಯಾತತ್ವವನ್ನೊಪ್ಪಿಕೊಂಡು ಒಂದು ಪೂರ್ವ ಉದಾಹರಣೆ(Precedent)ಯನ್ನು ನಿರ್ಮಿಸಿದ್ದಾರೆ. ಮುಸಲ್ಮಾನರ ಬಹುಸಂಖ್ಯೆಯಲ್ಲಿದ್ದ ಕಡೆ ದೇಶವನ್ನು ಕತ್ತರಿಸಿ ಅವರಿಗೆ ಒಪ್ಪಿಸಿದ್ದಾರೆ. ಮುಸಲ್ಮಾನರು ತಿರುಗಿ ಅದೇ ತಂತ್ರ ಬಳಸುವುದು ನಿಶ್ಚಿತ. ಹೈದರಾಬಾದಿನ ಜಮಾತ್ ಸಮ್ಮೇಳನದಲ್ಲಿ ಮುಸಲ್ಮಾನರಿಗೆ ಪ್ರತ್ಯೇಕ ಭೂಮಿಯ ಬೇಡಿಕೆ ಕೇಳಿ

ಬಂತು. ಆದ್ದರಿಂದ ಹರಿಜನರು ಮುಸಲ್ಮಾನರಾಗಿ ಹೋದರೆ ಹೋಗಲಿ, ಎಂದು ಉದಾಸೀನ ಭಾವ ತಳೆಯುವುದು ಉಚಿತವಲ್ಲ.

**ಪ್ರಶ್ನೆ :** ಹರಿಜನರಿಗೆ ವಿಶೇಷ ಸವಲತ್ತುಗಳನ್ನು ನೀಡುತ್ತಾ ಹೋಗುವುದು ಅನಿಷ್ಟ ಪರಿಣಾಮ ಬೀರುವುದಿಲ್ಲವೆ ?

**ಮೀಸಲಾತಿ ಸಮಸ್ಯೆಗೆ ಪರಿಹಾರ**

**ಉತ್ತರ :** ಒಂದು ರೀತಿ ಯೋಚಿಸಿದಾಗ ಇದು ನಿಜ. ಆದರೆ ನಾಣ್ಯದ ಇನ್ನೊಂದು ಮುಖವನ್ನೂ ನಾವು ಗಮನಿಸಬೇಕು. ಸಾವಿರಾರು ವರ್ಷಗಳಿಂದ ಅವರು ತುಳಿಯಲ್ಪಟ್ಟು ಹಿಂದುಳಿದಿದ್ದಾರೆ. ಉಳಿದವರೊಡನೆ ಅವರು ಸಮಾನರಾಗಬೇಕಾಗಿದೆ, ಈ ದೃಷ್ಟಿಯಿಂದಲೇ ತಾತ್ಕಾಲಿಕವಾಗಿ ಹತ್ತು ವರ್ಷ ನೌಕರಿ ಇತ್ಯಾದಿಗಳಲ್ಲಿ ಅವರಿಗೆ ಮೀಸಲಾತಿ ಇರಲೆಂದು ರಾಜ್ಯಾಂಗಕರ್ತರು ಪ್ರಾರಂಭದಲ್ಲಿ ಯೋಚಿಸಿದ್ದರು. ಮನೆಯಲ್ಲಿ ಸವೊಬ್ಬ ತಮ್ಮ ಖಾಯಿಲೆ ಬಿದ್ದು ದುರ್ಬಲನಾಗಿದ್ದಾಗ ತಾತ್ಕಾಲಿಕವಾಗಿ ಅವನಿಗೆ ವಿಶೇಷ ಗಮನ ನೀಡಿ ಟಾನಿಕ್ ಕುಡಿಸಿ ಆರೋಗ್ಯ ಸುಧಾರಿಸಲು ಪ್ರಯತ್ನಿಸುವುದಿಲ್ಲವೇ ಹಾಗೆ ಇದು. ಆದರೆ ಈ ಮೀಸಲಾತಿಗಳನ್ನು ಚಿರಂತನಗೊಳಿಸುವ ಪ್ರಯತ್ನ ಮಾತ್ರ ಅಸಮರ್ಥನೀಯ. ದುರದೃಷ್ಟದಿಂದ ನಮ್ಮ ರಾಜಕಾರಣಿಗಳು ಮತಗಳ ದುರಾಸೆಗೆ ಬಿದ್ದಿರುವುದರಿಂದ ಈ ಬಗ್ಗೆ ಉಚಿತವಾದ ನಿಲುವನ್ನು ತಳೆಯುಲಾರರು. ಆದ್ದರಿಂದ ಈ ಸಮಸ್ಯೆಗೆ ಪರಿಹಾರವನ್ನು ಪ್ರತ್ಯೇಕವಾಗಿಯೇ ಯೋಚಿಸಬೇಕು. ಮೊದಲನೆಯದಾಗಿ 'ತಾವು ಉಳಿದವರಿಗೆ ಸಮಾನರಲ್ಲ. ತಾವು ದುರ್ಬಲರು' ಎಂಬ ಕೀಳರಿಮೆ ಶಾಶ್ವತವಾಗದಂತೆ ಹರಿಜನ ಬಂಧುಗಳು ಅದರಲ್ಲೂ ವಿಶೇಷವಾಗಿ ಈ ಸವಲತ್ತುಗಳಿಂದ ಮುಂದುವರಿದವರು, ತಾವಾಗಿ ಅದನ್ನು ತೊರೆಯುವಂತೆ ಅವರಿಗೆ ನಾವು ಮನಗಾಣಿಸಬೇಕು, ಹಿಂದೆ ರಾಜ್ಯಾಂಗ ರಚನೆಯ ಸಂದರ್ಭದಲ್ಲಿ ಅಲ್ಪಸಂಖ್ಯಾತರೆಂಬ ನೆಪದಿಂದ ತಮಗೆ ರಾಜ್ಯಾಂಗಕರ್ತರು ಕೊಡಮಾಡಿದ ವಿಶೇಷ ಸವಲತ್ತುಗಳನ್ನು ಇದೇ ಕಾರಣಕ್ಕಾಗಿ ಪಾರ್ಸಿಗಳು ನಿರಾಕರಿಸಿಬಿಟ್ಟರು. ನಾವೂ ಇದನ್ನು ಅವರಿಗೆ ನೆನಪಿಸಬೇಕು. ಎರಡನೆಯದಾಗಿ ಈ ಮೀಸಲಾತಿ ಮುಂತಾದ ಸವಲತ್ತುಗಳನ್ನು ಮುಂದುವರಿಸಬೇಕೇ ಬೇಡವೇ ಎಂಬುದನ್ನು ನಿಷ್ಪಕ್ಷಪಾತವಾಗಿ ನಿರ್ಧರಿಸಲು ರಾಜಕಾರಣಿಗಳಲ್ಲದ ಪ್ರಮುಖರ ಸಮಿತಿಯೊಂದನ್ನು ನೇಮಿಸಬೇಕು. ಸಾಮಾಜಿಕ ಕಾರ್ಯಕರ್ತರು, ನ್ಯಾಯಾಧೀಶರು, ಸಮಾಜಶಾಸ್ತ್ರ

ವಿಜ್ಞಾನಿಗಳು ಮುಂತಾದವರು ಆ ಸಮಿತಿಯು ವಿಶೇಷ ಅಧ್ಯಯನ ನಡೆಸಿ ಈ ರಿಯಾಯಿತಿಗಳು ಎಷ್ಟು ದಿನ ಮುಂದುವರಿಯಬೇಕು ಎಂಬುದನ್ನು ನಿರ್ಧರಿಸಬೇಕು.

**ಪ್ರಶ್ನೆ :** ಹರಿಜನರ ಸಾಮಾಜಿಕ ಅಸಮಾನತೆಯನ್ನು ನೀಗಿಸಲು ಅವರ ಆರ್ಥಿಕ ಸ್ಥಿತಿಯು ಸುಧಾರಣೆ ಆಗಬೇಕು. ಅದಕ್ಕಾಗಿ 'ಬಾಂಗ್ಲಾ ಫಂಡ್'ನಂತೆ 'ಹರಿಜನ ಫಂಡ್' ಒಂದನ್ನು ಏಕೆ ಶೇಖರಿಸಬಾರದು ?

**ಸಮಾನತೆಯ ವ್ಯವಹಾರ ಮುಖ್ಯ**

**ಉತ್ತರ :** ಆರ್ಥಿಕ ಅಸಮಾನತೆ ದೂರವಾಗಬೇಕೆಂಬುದು ನಿಜ. ಆದರೆ ಆರ್ಥಿಕಮಟ್ಟ ಏರಿದ ಮಾತ್ರಕ್ಕೆ ಸಾಮಾಜಿಕ ಅಸಮಾನತೆ ಅಳಿಯುವುದೇ ? ಹರಿಜನ ಬಂಧುಗಳ ಅನುಭವ ಬೇರೆಯೇ ಇದೆ. ಉದಾಹರಣೆಗೆ, ದಿ॥ ಭರಣಯ್ಯನವರು ತುಂಬಾ ವಿದ್ಯಾವಂತರು, ಸರ್ಕಾರದಲ್ಲಿ ಉನ್ನತ ಅಧಿಕಾರಿಯಾಗಿದ್ದವರು. ಪಬ್ಲಿಕ್ ಸರ್ವಿಸ್ ಕಮೀಷನ್‌ನ ಅಧ್ಯಕ್ಷರೂ ಆಗಿದ್ದರು. ಸಂಸ್ಕೃತ ಪಾಂಡಿತ್ಯವೂ ಅವರಲ್ಲಿತ್ತು. ಆದರೂ ಅವರು ಒಮ್ಮೆ ವರ್ಗವಾಗಿ ಒಂದು ಜಿಲ್ಲಾ ಕೇಂದ್ರಕ್ಕೆ ಹೋದಾಗ ಹರಿಜನರಾದ ಕಾರಣ ಅವರಿಗೆ ವಸತಿಗೆ ಮನೆಯೇ ಸಿಗಲಿಲ್ಲ. ಆದ್ದರಿಂದಲೇ "ನಮಗೆ ಹಣವಲ್ಲ, ಅನುಕಂಪವಲ್ಲ, ನಮಗೆ ಬೇಕಾಗಿರುವುದು ಸಾಮಾಜಿಕ ಘನತೆ, ಸಮಾನತೆ" ಎಂದು ಹರಿಜನ ಬಂಧುಗಳು ಹೇಳುತ್ತಿದ್ದಾರೆ. ಅವರ ಆರ್ಥಿಕ ಸುಧಾರಣೆಗೆ ಪ್ರಯತ್ನಿಸಬಾರದೆಂದು ನಾನು ಹೇಳುತ್ತಿಲ್ಲ. ಆದರೆ ಅಷ್ಟರಿಂದಲೇ ಅವರ ಸಮಸ್ಯೆ ಬಗೆಹರಿಯುವುದಿಲ್ಲ. ಅವರೊಂದಿಗೆ ಸಮಾನತೆಯ ವ್ಯವಹಾರ ನಡೆಸುವಂತೆ ಜನರ ಹೃದಯ ಪರಿವರ್ತನೆ ಮಾಡಲು ನಾವು ಪ್ರಯತ್ನಿಸಬೇಕು. ಮೊದಲು ಸಮಾನತೆಯ ಭಾವನೆ, ನಂತರ ಆರ್ಥಿಕ ಅಭಿವೃದ್ಧಿ. ಮೊದಲನೆಯದು ಆಯಿತಾದರೆ, ಎರಡನೆಯದು ತಾನಾಗಿ ಆಗುತ್ತದೆ.

**ಪ್ರಶ್ನೆ :** ಮತಾಂತರದ ಈ ಗಾಳಿಯನ್ನು ಪಯೋಗಿಸಿ ಹರಿಜನರನ್ನು ಉಚ್ಚವರ್ಣದ ಯಾವುದಾದರೂ ಒಂದು ಜಾತಿಗೆ ಏಕೆ ಸೇರಿಸಬಾರದು. ಉದಾ : ಡಾ॥ ಅಂಬೇಡ್ಕರ್ ಅವರೇ ಬೌದ್ಧ ಧರ್ಮಕ್ಕೆ ಸೇರಿಕೊಂಡರು.

**ಅಸ್ಪೃಶ್ಯತೆಗೆ ನೈಜ ಪರಿಹಾರ ಮನಸ್ಸಿನ ಪರಿವರ್ತನೆ**

**ಉತ್ತರ :** ಡಾ॥ ಅಂಬೇಡ್ಕರ್ ಬಹುಕಾಲ ಯೋಚಿಸಿದ ನಂತರ

ಹರಿಜನ ಬಂಧುಗಳ ಸಮಸ್ಯೆಗೆ ಪರಿಹಾರವೆಂದು ಬೌದ್ಧ ಮತವನ್ನು ಅಂಗೀಕರಿಸಿದ್ದು ನಿಜ. ನಂತರ ಅವರ ಸಹಸ್ರಾರು ಅನುಯಾಯಿಗಳು ಹಾಗೇ ಮಾಡಿದರು. ಆದರೆ ಅವರಿಗೆ ಅದರಿಂದ ಅಸ್ಪೃಶ್ಯತೆಯ ಹಣೆಪಟ್ಟಿ ಮಾತ್ರ ಹೋಗಲಿಲ್ಲ. 'ನವ ಬೌದ್ಧ'ರೆಂದು ಕರೆಸಿಕೊಂಡ ಈ ಜನರ ಬಳಿ ಬೌದ್ಧ ಮತದ ಯಾವ ಗುರುವೂ ಈವರೆಗೆ ಹೋಗಿಲ್ಲ. ಬೌದ್ಧರು ಅವರನ್ನು ನವ ಬೌದ್ಧರು (ಅರ್ಥಾತ್ ಹರಿಜನರು) ಎಂದು ದೂರವಿಟ್ಟಿದ್ದಾರೆ. ಈ ಅನುಭವವೇ "ನಾವು ಹಿಂದು ಸಮಾಜದ ಯಾವ ಪಂಗಡಕ್ಕೆ ಸೇರಿಕೊಂಡರೂ ನಮ್ಮ ಸಮಸ್ಯೆ ಪರಿಹಾರವಾಗದು" ಎಂಬ ಹತಾಶತೆ ಹರಿಜನ ಬಂಧುಗಳಲ್ಲಿ ಮೂಡಿಸಿರುವುದು. ಈ ಕಾರಣದಿಂದಲೇ ಕೆಲವರಿಗೆ ಇಸ್ಲಾಂ ಈಗ ಆಕರ್ಷಕವಾಗಿ ಕಾಣುತ್ತಿರುವುದು (ಇಸ್ಲಾಮಿನ ಸಮತೆ ಒಂದು ಭ್ರಮೆ ಎಂಬುದನ್ನು ನಾನು ಈಗಾಗಲೇ ವಿವರಿಸಿದ್ದೇನೆ). ಆದ್ದರಿಂದ ನಿಮ್ಮ ಸಲಹೆಯಲ್ಲಿ ಹೊಸದೇನಿಲ್ಲ. ಈಗಾಗಲೇ ಪ್ರಯೋಗಕ್ಕೊಳಿದು ವಿಫಲವಾಗಿದೆ ಅದು. ಮನದಾಳದಲ್ಲಿರುವ ಈ ಅಸ್ಪೃಶ್ಯತೆಯ ರೂಢಿಗತ ಆಚರಣೆಯನ್ನು ತೊರೆಯುವುದು ಅಂದರೆ ಮಾನಸಿಕ ಪರಿವರ್ತನೆಯೇ ವಿನಹ ಜಾತಿ ಅಥವಾ ಮತಗಳ ಪರಿವರ್ತನೆಯಿಂದ ಈ ಸಮಸ್ಯೆ ಪರಿಹಾರವಾಗದು.

**ಪ್ರಶ್ನೆ :** ಜಾತಿ ವ್ಯವಸ್ಥೆ ನಾಶವಾಗದ ವಿನಹ ಹರಿಜನರ ಉದ್ಧಾರ ಅಸಾಧ್ಯ ಎಂಬ ಒಂದು ಅಭಿಪ್ರಾಯವಿದೆ. ನೀವೇನು ಹೇಳುತ್ತೀರಿ ?

**ಜಾತಿ ಅಸಮಾನತೆಯ ನಿರ್ಮೂಲನ – ಸಂಘದ ಯಶಸ್ವಿ ವಿಧಾನ**

**ಉತ್ತರ :** ಜಾತಿ ವ್ಯವಸ್ಥೆಯ ನಾಶಕ್ಕೆ ಈವರೆಗೆ ಪ್ರಯತ್ನ ನಡೆದಾಗಲೆಲ್ಲ ಹಳೆಯ ಜಾತಿಗಳೊಂದಿಗೆ ಹೊಸ ಹೊಸ ಜಾತಿಗಳು ಹುಟ್ಟಿಕೊಂಡವೇ ವಿನಹ ಸಮಸ್ಯೆ ಪರಿಹಾರವಾಗಲಿಲ್ಲ. ಕರ್ನಾಟಕದಲ್ಲಿ ಬಸವಣ್ಣನವರು ಹಲವಾರು ಜಾತಿಯ ಜನರನ್ನು ಕೂಡಿಸಿ, ಅವರಿಗೆ ಲಿಂಗಧಾರಣೆ ಮಾಡಿಸಿದರು. ಜಾತಿ ವ್ಯವಸ್ಥೆಯ ನಿರ್ಮೂಲನವೇ ಅವರ ಮೂಲೋದ್ದೇಶವಾಗಿತ್ತು. ಆದರೆ ಇದರ ಫಲವಾಗಿ ಹಳೆಯ ಜಾತಿಗಳಂತೂ ಅಳಿಯಲಿಲ್ಲ. ಹೊಸದಾಗಿ ವೀರಶೈವ ಜಾತಿಯೊಂದು ಹುಟ್ಟಿಕೊಂಡಿತು. ತಮಿಳುನಾಡಿನಲ್ಲಿ ಶ್ರೀ ರಾಮಾನುಜರ ಪ್ರಯತ್ನಕ್ಕೂ ಅದೇ ಪ್ರತಿಫಲ ಸಿಕ್ಕಿತು. ಹರಿಜನರು ಸೇರಿದಂತೆ ವಿವಿಧ ಜಾತಿಯ ಜನರಿಗೆ ಮಂತ್ರೋಪದೇಶವನ್ನು ನೀಡಿ, ನಾಮಧಾರಣೆಯ ವಿಧಿಯನ್ನು ಸೂಚಿಸಿ ಅವರೆಲ್ಲರನ್ನೂ ಶ್ರೀವೈಷ್ಣವರೆಂದು

ಕರೆಯಲಾಯಿತು. ಇಂದು ಈ ಶ್ರೀವೈಷ್ಣವರದೇ ಒಂದು ಪ್ರತ್ಯೇಕ ಪಂಗಡ ವಷ್ಟೇ ಅಲ್ಲ ತಮ್ಮ ನಾಮಂಗಳು U ಮಾದರಿಯಲ್ಲಿರಬೇಕೋ Y ರೀತಿಯಂದಿರ ಬೇಕೋ ಎಂಬ ಜಗಳದಿಂದ ಅದರಲ್ಲೂ ಇನ್ನೆರಡು ಪಂಗಡಗಳಾಗಿವೆ. ಉತ್ತರದ ಪಂಜಾಬ್‌ನಲ್ಲಿ ಗುರುನಾನಕರೂ ಹೀಗೆ ಪ್ರಯತ್ನಿದರು. ಆದರೆ ಅವರ ಸಿಖ್ಖ(ಶಿಷ್ಯ)ರು ಇಂದು ತಾವೇ ಒಂದು ಪ್ರತ್ಯೇಕ ಪಂಗಡವಾಗಿದ್ದಾ ರಷ್ಟೇ ಅಲ್ಲ. ತಾವು ಹಿಂದುಗಳೇ ಅಲ್ಲ ಎಂದು ಹೇಳುವಷ್ಟರ ಮಟ್ಟಿಗೆ ಅವರ ಪ್ರತ್ಯೇಕತೆ ಬೆಳೆದಿದೆ. ದಯಾನಂದ ಸರಸ್ವತಿಗಳ ಆರ್ಯ ಸಮಾಜದ ಪ್ರಯೋಗವೂ ಆರ್ಯ ಸಮಾಜಿಗಳೆಂಬ ಹೊಸ ಪಂಗಡವನ್ನು ಸೃಷ್ಟಿಸಿತು. ಈ ಯಾವ ಪ್ರಯತ್ನಗಳೂ ಜಾತಿ ವ್ಯವಸ್ಥೆಯನ್ನು ನಿವಾರಿಸಲು ಯಶಸ್ವಿ ಆಗಲಿಲ್ಲ.

ಈ ಅನುಭವದಿಂದಲೇ ಸಂಘದಲ್ಲಿ ನಾವು ಈ ಜಾತಿ ವ್ಯವಸ್ಥೆಯನ್ನು ನಿರುಪದ್ರವಿಯಾಗಿಸಲು ಹೊಸ ವಿಧಾನವನ್ನು ಅನುಸರಿಸಿದ್ದೇವೆ. ನಮ್ಮ ಸ್ವಯಂಸೇವಕರ ಮುಂದೆ ಜಾತಿ ಪ್ರಜ್ಞೆಗಿಂತ ವಿಶಾಲವಾದ ಇನ್ನೊಂದು ಹಿರಿಯ ಆದರ್ಶವನ್ನಿರಿಸಿದ್ದೇವೆ. “ನಾವೆಲ್ಲರೂ ಹಿಂದುಗಳು, ಒಂದೇ ತಾಯಿಯ ಮಕ್ಕಳು, ಅಣ್ಣತಮ್ಮಂದಿರು. ನಮ್ಮ ನಿಷ್ಠೆ ರಾಷ್ಟ್ರಕ್ಕೆ. ರಾಷ್ಟ್ರಕ್ಕೆ ಹಿತಕರವಾದದ್ದು ನಮಗೂ ಹಿತವೇ. ಅದಕ್ಕೆ ಹಾನಿ ತರುವುದೆಲ್ಲವೂ ನಮಗೆ ಹಾನಿಕರವೇ” ಇದೇ ಆ ಆದರ್ಶ. ಈ ಆದರ್ಶದಿಂದ ಪ್ರೇರಿತರಾಗಿರುವುದ ರಿಂದಲೇ ಸ್ವಯಂಸೇವಕರ ನಡುವೆ ಜಾತಿ, ಭಾಷೆ, ಪ್ರಾಂತ ಮುಂತಾದ ಯಾವ ಸಂಕುಚಿತ ಭಾವನೆಗಳ ಅಡ್ಡಗೋಡೆಗಳೂ ಇಲ್ಲ. ಸ್ವತಃ ಗಾಂಧಿಜೀ, ಡಾ|| ಅಂಬೇಡ್ಕರ್ ಅವರೂ ಸಂಘದ ಈ ಸಾಧನೆಯನ್ನು ಪ್ರಶಂಸಿಸಿರುವು ದನ್ನು ಈಗಾಗಲೇ ನಾನು ತಿಳಿಸಿದ್ದೇನೆ. ಯಾವದೇ ‘ಜಾತಿ ಅಳಿಸಿ’ ಚಳುವಳಿಗೆ ನಾವು ಕೈಹಾಕಿಲ್ಲ ನಿಜ. ಏಕೆಂದರೆ ನಾವು ಜಾತಿ ಅಳಿಸಿ ಎನ್ನುವವರೂ ಅಲ್ಲ, ಉಳಿಸಿ ಎನ್ನುವವರೂ ಅಲ್ಲ. We are compaigners neither of caste abolition nor for its preservation ಜಾತಿಗಳು ಉಳಿಯಬೇಕೆಂದೂ ನಾವು ಅನ್ನುವುದಿಲ್ಲ, ಅಳಿಯಬೇಕೆಂದೂ ಹೇಳುವುದಿಲ್ಲ. ಆದರೆ ರಾಷ್ಟ್ರಹಿತಕ್ಕೆ ಧಕ್ಕೆ ತಾರದಂತೆ ನಡೆದುಕೊಳ್ಳಬೇಕು. ಅದಕ್ಕಾಗಿ ಸಮಾನತೆ–ಸೋದರತೆಗಳ ವ್ಯವಹಾರ ಬೇಕು ಎಂಬುದೇ ಸಂಘದಲ್ಲಿ ನಾವು ಮೈಗೂಡಿಸಿಕೊಂಡಿರುವ ಶಿಕ್ಷಣ. ಒಂದು ಗೆರೆಯನ್ನು ಚಿಕ್ಕದು ಮಾಡಲು ಅದನ್ನು ಅಳಿಸುವದೊಂದು ವಿಧಾನ. ಅದರ ಎದುರಿಗೆ ಅದಕ್ಕಿಂತ ದೊಡ್ಡಗೆರೆ ಎಳೆಯುವುದೂ ಒಂದು. ಅದರಿಂದಲೂ ಅದು ಚಿಕ್ಕದಾಗುತ್ತದೆ. ನಮ್ಮೆದುರಿಗೆ ಹಿರಿಯ ಆದರ್ಶವಿರಿಸಿ

ಅದರಂತೆ ನಡೆದುಕೊಂಡಿರುವುದರಿಂದಲೇ ಸಂಘವು ಈ ಭಾರಿ ಸಮಸ್ಯೆಗೆ ಸುಲಭ ಪರಿಹಾರ ಕಂಡುಕೊಂಡು ಯಶಸ್ವಿಯಾಗಿದೆ.

**ಪ್ರಶ್ನೆ :** ಹರಿಜನರಿಗೆ ಪ್ರತ್ಯೇಕ ವಸತಿ ಇದ್ದರೆ ಅಸ್ಪೃಶ್ಯತೆ ಅಳಿಯದು. ಹರಿಜನೇತರ ಹಿಂದುಗಳ ಮಧ್ಯೆ ಅವರು ವಾಸಿಸುವಂತೆ ಏರ್ಪಡಿಸಿದರೆ ಸಮಸ್ಯೆ ಬಗೆಹರಿಯಬಹುದಲ್ಲವೆ ?

**ಮನಗಳು ಹತ್ತಿರವಾಗಲಿ**

**ಉತ್ತರ :** ನಿಮ್ಮ ಸಲಹೆ ಒಳ್ಳೆಯದೇ. ಇದಕ್ಕೆ ನನ್ನ ವಿರೋಧ ವಿಲ್ಲ. ಆದರೆ ಮನೆಗಳು ಎಲ್ಲಿರಬೇಕು ಎಂಬುದಲ್ಲ ಪ್ರಶ್ನೆ, ಮನಸ್ಸಿನಲ್ಲಿ ಮನೆ ಮಾಡಿರುವ ಅಸ್ಪೃಶ್ಯತೆಯ ಭಾವನೆಯನ್ನು ಹೇಗೆ ತೊಲಗಿಸಬೇಕು ಎಂಬುದು. ಮುಸಲ್ಮಾನರೂ ಸಾಮಾನ್ಯವಾಗಿ ಪ್ರತ್ಯೇಕವಾಗಿ ವಾಸಿಸುತ್ತಾರೆ. ಆದರೆ ವಸತಿ ಬೇರೆ ಎಂಬ ಕಾರಣದಿಂದ ಅವರನ್ನು ಅಸ್ಪೃಶ್ಯರೆಂದು ನಾವು ಬಗೆಯುತ್ತೇವೆಯೇ ? ಅವರನ್ನು ನಮ್ಮ ಮನೆಗೆ ಬರಗೊಡುತ್ತೇವಲ್ಲ ! ಹೃದಯದಲ್ಲಿ ಹರಿಜನರೂ ನಮ್ಮಂತೆಯೇ ಹಿಂದುಗಳು ಅವರು ನಮ್ಮ ಬಂಧುಗಳು ಎಂಬ ಭಾವನೆ ಬೆಳೆಸಿಕೊಳ್ಳುವುದು ಮುಖ್ಯ. ಅದು ಇದ್ದರೆ ವಸತಿ ದೂರವಿದ್ದರೂ ಸಮಸ್ಯೆ ದೂರಾಗುತ್ತಾ ಹೋಗುವುದು. ಈ ಭಾವನೆ ಬೆಳೆಯದಿದ್ದರೆ ವಸತಿ ಹತ್ತಿರವಿದ್ದರೂ ಲಾಭವಾಗದು. ಸಮಸ್ಯೆ ಬಿಗಡಾಯಿಸುತ್ತಲೇ ಹೋಗುವುದು.

**ಪ್ರಶ್ನೆ :** ಹರಿಜನರನ್ನು ದೇವಸ್ಥಾನಗಳಲ್ಲಿ ಅರ್ಚಕರನ್ನಾಗಿ ನೇಮಿಸುವುದೂ ಈ ಸಮಸ್ಯೆಯ ಪರಿಹಾರಕ್ಕೆ ಒಂದು ಉಪಾಯವಲ್ಲವೇ ?

**ಭಕ್ತನಾದರೆ ಹರಿಜನನೂ ಅರ್ಚಕನಾಗಬಹುದು**

**ಉತ್ತರ :** ದೇವಸ್ಥಾನದಲ್ಲಿ ಜಾತಿಯನ್ನು ನೋಡಿ ಅಲ್ಲ ಭಕ್ತಿಯ ಗುಣವನ್ನು ನೋಡಿ ಅರ್ಚಕರನ್ನು ನೇಮಿಸಬೇಕು. ಬ್ರಾಹ್ಮಣನೊಬ್ಬ ದೈವ ಭಕ್ತನಲ್ಲದಿದ್ದರೆ ಆತ ಬ್ರಾಹ್ಮಣನಾಗಿದ್ದರೂ ಅರ್ಚಕನಾಗಲು ಅನರ್ಹ. ಹರಿಜನನೊಬ್ಬ ದೈವಭಕ್ತಿಯ ಗುಣ ಪಡೆದವನಾದರೆ ಬ್ರಾಹ್ಮಣನಷ್ಟೇ ಅರ್ಚಕನಾಗಲು ಅರ್ಹ. ಆತನಿಗೆ ಆ ವೃತ್ತಿಗೆ ಬೇಕಾದ ಯೋಗ್ಯ ತರಬೇತಿ ನೀಡಬೇಕಾಗುವುದು. ಆದರೆ ಆ ಬಗೆಯ ತರಬೇತಿ ಬ್ರಾಹ್ಮಣನಿಗೂ ಬೇಕಲ್ಲ ? ಆದ್ದರಿಂದ ಈ ವೃತ್ತಿಗೆ ಜಾತಿಯಲ್ಲ, ಭಕ್ತಿಯೇ ಮುಖ್ಯ ಆಧಾರ ವಾಗಬೇಕು. ತಮಿಳುನಾಡಿನಲ್ಲಿ ಡಿ. ಎಂ. ಕೆ. ಸರ್ಕಾರ ಹರಿಜನರನ್ನು

ಅರ್ಚಕರನ್ನಾಗಿ ನೇಮಿಸುವ ಘೋಷಣೆ ಮಾಡಿದಾಗ ಒಂದು ಭಾರಿ ವಿವಾದ ಏರ್ಪಟ್ಟಿತು. ಈ ಹಿನ್ನೆಲೆಯಲ್ಲಿ ಒಂದು ಪತ್ರಿಕಾ ಗೋಷ್ಠಿಯಲ್ಲಿ ಈಚೆಗೆ ನನ್ನನ್ನು ಪ್ರಶ್ನಿಸಿದಾಗ ನಾನು ಇದೇ ಮಾತು ಹೇಳಿರುವೆ.

ಪ್ರಶ್ನೆ : ಹರಿಜನೇತರ ಹಿಂದುಗಳು ಹರಿಜನ ಮಹಿಳೆಯರನ್ನೇಕೆ ಮದುವೆ ಆಗಬಾರದು ? ಇದರಿಂದ ಐಕ್ಯತೆ ಮೂಡಬಹುದಲ್ಲ ?

**ಬಂಡಿಯನ್ನು ಕುದುರೆಯ ಮುಂದೆ ಕಟ್ಟುವುದು ಬೇಡ**

**ಉತ್ತರ :** ಮದುವೆಯಿಂದ ಐಕ್ಯತೆ ಮೂಡುವುದೇ? ಮದುವೆಯಾದ ಗಂಡಹೆಂಡಿರು ಜಗಳವಾಡಬಾರದು ಎಂದಿದೆಯೇ ? ಮದುವೆಯಿಂದ ಐಕ್ಯತೆ ಎಂಬ ಮಾತು ಬಂಡಿಯನ್ನು ಮುಂದೆ ಕಟ್ಟಿ ಕುದುರೆಯನ್ನು ಹಿಂದಿಟ್ಟಂತೆ ವ್ಯರ್ಥವಾಗುವುದು. ಮುಖ್ಯವಾಗಿ ಹಾರ್ದಿಕ ಏಕತೆ ಬೇಕು. ಹಾರ್ದಿಕ ಏಕತೆ ಇದ್ದಾಗ ಮದುವೆಗಳು ತಾನಾಗಿ ಆಗುವುವು. If there is unity of hearts marriages automatically follow. ಸಂಘವು ಅಂತರ ಜಾತೀಯ ಮದುವೆಗಳನ್ನು ವಿರೋಧಿಸುವುದಿಲ್ಲ, ಆದರೆ ಹಾರ್ದಿಕ ಏಕತೆ ಹಾಗೂ ಸಮಂತೆಗಳಿಲ್ಲದಿದ್ದರೆ ವಿವಾಹದ ಪ್ರಯೋಗಗಳಿಂದ ಏನೂ ಉಪಯೋಗವಾಗುವುದಿಲ್ಲವಾದುದರಿಂದ ಈ ಏಕತೆಯ ನಿರ್ಮಾಣಕ್ಕಾಗಿ ಅದು ಶ್ರಮಿಸುವುದು.

ಪ್ರಶ್ನೆ : ಅಸ್ಪೃಶ್ಯತೆಯ ಸಮಸ್ಯೆ ಹೇಗೆ ಹುಟ್ಟಿಕೊಂಡಿತು ?

**ಕಸ ಹೇಗೇ ಬಂದಿರಲಿ ಅದನ್ನು ಬಳಿದು ಹಾಕೋಣ**

**ಉತ್ತರ :** ತಲೆನೋವು ವಿಷಮಿಸಿ ತಡೆಯಲಾರದ ಸ್ಥಿತಿ ಮುಟ್ಟಿದಾಗ ಅನಾಸಿನ್ ನುಂಗಿ ಅಮೃತಾಂಜನ ಹಚ್ಚಿ ಅದನ್ನು ತಹಬದಿಗೆ ತರಲು ಯತ್ನಿಸುತ್ತೀರೊ? ಅಥವಾ ಅದು ಹೇಗೆ ಬಂತು, ಕಾರಣಗಳೇನು ಎಂದು ಯೋಚಿಸುತ್ತ ಕೂರುತ್ತೀರೊ ? ಹಳೆಯದನ್ನು ಕೆದಕಿಕೂರುವ ಕಾಲ ಇದಲ್ಲ. ಹಾಗೆ ಕೆದಕುವುದರಿಂದ ಸಮಸ್ಯೆಗೆ ಪರಿಹಾರವೂದೊರಕುವುದಿಲ್ಲ. ಈಗೇನು ಮಾಡಬೇಕೆಂಬುದು ಮುಖ್ಯ. ಕಸ ಹೇಗೆಬಂತು ಎಂದು ಯೋಚಿಸುತ್ತಾ ಕೂರುವುದಕ್ಕಿಂತ ಅದನ್ನು ಬಳಿದು ಮನೆಯನ್ನು ಶುಚಿಗೊಳಿಸುವುದು ಉತ್ತಮ ಕೆಲಸ ಅಲ್ಲವೆ ?

ಪ್ರಶ್ನೆ : ಆದರೆ ಮನುಸ್ಮೃತಿಯಲ್ಲಿ ಅಸ್ಪೃಶ್ಯತೆಗೆ ಆಧಾರವಿದೆ ಎನ್ನುತ್ತಾರಲ್ಲಾ ?

**ಬಂದಿದೆ, ಹೊಸ ಸ್ಮೃತಿ ವಾಕ್ಯ**

**ಉತ್ತರ:** ಸ್ಮೃತಿಗಳೇನು ಸಾರ್ವಕಾಲಿಕ ಸತ್ಯಗಳಲ್ಲ. ಶ್ರುತಿಗಳು ಸತ್ಯ. ಕಾಲಕ್ಕೆ ತಕ್ಕಂತೆ ಸ್ಮೃತಿಗಳು ಬದಲಾಗುತ್ತ ಬಂದಿವೆ. ಬದಲಾಗಲೂ ಬೇಕು. ಕಾಲಬಾಹ್ಯವಾದ ಯಾವ ಸಂಗತಿಯೂ ಉಳಿಯದು.

ಸ್ಮೃತಿಗಳಲ್ಲಿ ಏನೇ ಇರಲಿ ಅಸ್ಪೃಶ್ಯತೆಗೆ ಧಾರ್ಮಿಕ ಆಧಾರವಿಲ್ಲ ಎಂದು ಅನೇಕ ಧರ್ಮಾಚಾರ್ಯರು ಈಗಾಗಲೇ ಅಪ್ಪಣೆ ಕೊಟ್ಟಿದ್ದಾರೆ. ಎರಡು ವರ್ಷಗಳ ಹಿಂದೆ ಶೃಂಗೇರಿ, ದ್ವಾರಕೆ, ಬದರಿ ಮತ್ತು ಪುರಿ ಪೀಠಗಳ ನಾಲ್ವರೂ ಶಂಕರಾಚಾರ್ಯರೂ ಶೃಂಗೇರಿಯಲ್ಲಿ ಸೇರಿದ್ದಾಗ ಹಿಂದು ಸಮಾಜದ ಉಳಿದ ಜನ, ವರ್ಗಗಳಂತೆ ಹರಿಜನರೂ ಹಿಂದು ಸಮಾಜದ ಅಭಿನ್ನ ಅಂಗಗಳೆಂದೂ ಅವರ ಮೇಲೆ ಅತ್ಯಾಚಾರ ಮಾಡುವವರು ಪಾಪಿಗಳು, ನಾಸ್ತಿಕರು ಎಂದೂ ಸ್ಪಷ್ಟ ಹೇಳಿಕೆ ನೀಡಿದ್ದರು. ಕಂಚಿ ಕಾಮಕೋಟಿ ಪೀಠದ ಶಂಕರಾಚಾರ್ಯರೂ ಈಚೆಗೆ ಅಸ್ಪೃಶ್ಯತೆ ನಮ್ಮ ಧರ್ಮದ ಭಾಗವೆಂದು ಮನ್ನಿಸಬಾರದೆಂದು ಹೇಳಿರುವರಲ್ಲದೇ ಹರಿಜನರಿಗೂ ಧಾರ್ಮಿಕ ಶಿಕ್ಷಣ ದೊರೆಯುವಂಥ ಶಾಲೆಯೊಂದನ್ನು ತಾವು ತೆರೆಯಲಿರುವುದಾಗಿ ಘೋಷಿಸಿದ್ದಾರೆ. ಕರ್ನಾಟಕದಲ್ಲಿ ಈಗಾಗಲೇ ಕೆಲವು ವರ್ಷಗಳಿಂದ ವೇದ ಶಿಬಿರಗಳನ್ನು ನಡೆಸುವ ಮತ್ತು ಅದರಲ್ಲಿ ಹರಿಜನ ಹಿಂದೂಗಳಿಗೂ ಅವಕಾಶ ನೀಡುವ ಪ್ರಯೋಗ ಎರಡು ಕಡೆ ನಡೆಯುತ್ತಿದೆ. ಪೂಜ್ಯ ಪೇಜಾವರ ಶ್ರೀಗಳು ಅಸ್ಪೃಶ್ಯತಾ ನಿರ್ಮೂಲನದ ಕಾರ್ಯದಲ್ಲಿ ಮುಂಚೂಣಿಯ ಪಾತ್ರ ನಿರ್ವಹಿಸುತ್ತಿದ್ದಾರೆ. 'ಹಿಂದುಗಳೆಲ್ಲರೂ ಸೋದರರು ಅವರಲ್ಲಿ ಯಾರೂ ಪತಿತರಲ್ಲ' ಎಂದು ಪದೇ ಪದೇ ಘೋಷಿಸಿದ್ದಾರೆ. ಈ ಎಲ್ಲ ನಿಸ್ಸಂದಿಗ್ಧ ಘೋಷಣೆಗಳೂ ನಮಗೆ ಹೊಸ ಸ್ಮೃತಿವಾಕ್ಯಗಳಾಗಲಿ.

ಪ್ರಶ್ನೆ: ಹರಿಜನೋದ್ಧಾರಕ್ಕಾಗಿ ಪ್ರಯತ್ನಿಸುವವರು ಸಾಂಪ್ರದಾಯಿಕ ಮಡಿವಂತ ಜನರ ವಿರೋಧದಿಂದ ಕಷ್ಟಪಡಬೇಕಾಗುವದಲ್ಲ ?

**ಸಾಮಾಜಿಕ ಕಾರ್ಯಕರ್ತ ಕಷ್ಟಗಳನ್ನು ಲೆಕ್ಕಿಸುವುದಿಲ್ಲ**

**ಉತ್ತರ:** ಸುಮಾರು ಅರವತ್ತು ಎಪ್ಪತ್ತು ವರ್ಷಗಳ ಹಿಂದಿನ ಮಾತು. ಅಂದಿನ ಸಮಾಜದಲ್ಲಿ ವಿಧವೆಯರಿಗೆ ತುಂಬಾ ಕೀಳಾದ ಸ್ಥಾನ ಇತ್ತು. ಅಮಾನವೀಯವಾಗಿ ವ್ಯವಹರಿಸಲಾಗುತ್ತಿತ್ತು. ಮಹಾರಾಷ್ಟ್ರದಲ್ಲಿ ಅಣ್ಣಾಸಾಹೇಬ ಕರ್ವೆ ಎಂಬ ಸಾಮಾಜಿಕ ಕಾರ್ಯಕರ್ತರಿಗೆ ಇದರಿಂದ

ತುಂಬಾ ವ್ಯಥೆಯಾಯಿತು. ಧೈರ್ಯಮಾಡಿ ವಿಧವೆಯೊಬ್ಬಳನ್ನು ಅವರು ಮದುವೆ ಮಾಡಿಕೊಂಡರು. ಸಮಾಜವು ಕ್ರುದ್ಧಗೊಂಡು ಅವರನ್ನು ಬಹಿಷ್ಕರಿಸಿತು. ಆದರೆ ಅವರೇನೂ ಧೈರ್ಯಗೆಡಲಿಲ್ಲ. ಆಗಿನ ಕಾಲದಲ್ಲಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೂ ಸಮಾಜ ಅನುಕೂಲವಾಗಿರಲಿಲ್ಲ. ಆದರೆ ಕರ್ವೆಯವರು ಅವರಿಗಾಗಿ ಶಾಲೆಗಳನ್ನು ತೆರೆದರು. ಸ್ತ್ರೀ ವಿಮೋಚನೆಗಾಗಿ ಅವರು ಪಟ್ಟ ಪರಿಶ್ರಮ ಫಲಿಸಿದೆ. ಇಂದು ಅವರ ಹೆಸರು ಮಹಾರಾಷ್ಟ್ರದಲ್ಲಿ ಮನೆಮಾತಾಗಿದೆ. ಜನ 'ಮಹರ್ಷಿ' ಎಂಬ ಬಿರುದಿನಿಂದ ಅವರನ್ನು ಗೌರವಿಸಿದ್ದಾರೆ. ಹಾಗೆ ನೋಡಿದರೆ ಮಡಿವಂತ ಬ್ರಾಹ್ಮಣ ಕುಲದಲ್ಲಿ ಹುಟ್ಟಿದವರು, ಅವರು. ಮಹಿಳೆಯರಿಗಾಗಿ ದುಡಿಯುವುದು ತಮ್ಮ ನ್ಯಾಯೋಚಿತ ಕರ್ತವ್ಯವೆಂದು ಅವರು ಭಾವಿಸಿದ್ದರಿಂದ ಅದಕ್ಕಾಗಿ ಎಲ್ಲ ಕಷ್ಟಗಳನ್ನು ಅವರು ಸಹಿಸಲು ಸಿದ್ಧರಾದರು. ಸಾಮಾಜಿಕ ಕಾರ್ಯಮಾಡುವ ಮನಸ್ಸುಳ್ಳವರು ಮುಂಚೂಣಿಯಲ್ಲಿದ್ದು (Pioneers) ಸಮಾಜ ಸುಧಾರಣೆ ಮಾಡಬೇಕಾಗುವುದು. ಅವರು ಕಷ್ಟನಷ್ಟಗಳಿಗೂ ಸಿದ್ಧರಾಗಬೇಕು. ನಾವು ಮುಂಚೂಣಿಯಲ್ಲಿರಬೇಕೋ ಅಥವಾ ಕೇವಲ ಪರಿಸ್ಥಿತಿಯ ದಾಸರಾಗಿರಬೇಕೋ? ಹಾಗೆ ನೋಡಿದರೆ ಮೀನಾಕ್ಷಿಪುರದ ಘಟನೆಯ ನಂತರ ಸಾಮಾಜಿಕ ಮನಸ್ಸು ಪಕ್ವವಾಗಿದೆ ಎಂದು ನನಗೆ ಅನ್ನಿಸುತ್ತದೆ. ಹರಿಜನೋದ್ಧಾರದ ಕೆಲಸ ಹಿಂದಿನಷ್ಟು ಈಗ ಕಷ್ಟವಾಗಲಿಕ್ಕಿಲ್ಲ.

**ಪ್ರಶ್ನೆ :** ರಚನಾತ್ಮಕವಾಗಿ ಈಗ ಕೆಲಸ ನಡೆಯಬೇಕು. ಸಾಮೂಹಿಕವಾಗಿ ಮತ್ತು ವೈಯಕ್ತಿಕವಾಗಿ ನಾವೇನು ಮಾಡಬಹುದು?

**ಉತ್ತರ :** ಈ ಪ್ರಶ್ನೆಗೆ ಈಗಾಗಲೇ ಉತ್ತರ ನೀಡಿದ್ದೇನೆ. 'ಮಾಧವ'ನನ್ನು ನಮ್ಮ ಮನೆಗೆ ಬರಮಾಡಿಕೊಳ್ಳುವುದು, ನಮ್ಮ ಬಾವಿ, ಕೆರೆ ಮಂದಿರಗಳಿಗೆ ಆತನಿಗೆ ಪ್ರವೇಶ ನೀಡುವುದು ಇತ್ಯಾದಿ. ಇದಲ್ಲದೆ ಇನ್ನೂ ಅನೇಕ ರಚನಾತ್ಮಕ ಕಾರ್ಯಗಳೂ ಇವೆ. ಉದಾಹರಣೆಗೆ ಈ ಉಪೇಕ್ಷಿತ ಬಂಧುಗಳಿಗೆ ನಮ್ಮಲ್ಲಿ ವೈದ್ಯರಾದವರು ಉಚಿತ ವೈದ್ಯಸೇವೆಯನ್ನು, ಅವರು ಸಾಮಾಜಿಕ ಅತ್ಯಾಚಾರಗಳಿಗೆ ಒಳಗಾದಾಗ ನಮ್ಮ ವಕೀಲರು ಉಚಿತ ವಕೀಲಿ ಸೌಲಭ್ಯವನ್ನು ನೀಡಬೇಕು. ಉಪಾಧ್ಯಾಯರು ಅವರ ಮಕ್ಕಳನ್ನು ಉತ್ತಮ ಶಿಕ್ಷಣಗಳಿಸಲು ನೆರವಾಗುವುದರೊಂದಿಗೆ ತಾವೇ ಧಾರ್ಮಿಕ ತಿಳಿವಳಿಕೆಗಳನ್ನು ಅವರಿಗೆ ನೀಡಿ ಅವರ ಶ್ರದ್ಧೆಗಳನ್ನು ಪೋಷಿಸಬಹುದು. ಆರ್ಥಿಕವಾಗಿ ಅನುಕೂಲ

ಸ್ಥಿತಿಯಲ್ಲಿರುವವರು ಪೂಜ್ಯ ಪೇಜಾವರ ಶ್ರೀಗಳ ಮನವಿಯನ್ನು ಗಮನದಲ್ಲಿರಿಸಿ ತಮ್ಮ ಆದಾಯದ ಪ್ರತಿ ರೂಪಾಯಿಗೂ ಒಂದು ಪೈಸೆಯಂತೆ 'ಸಮಾಜ ನಿಧಿ'ಯನ್ನು ನೀಡುವ ಸಂಕಲ್ಪ ಮಾಡಬಹುದು. ಹೀಗೆ ಹಲವಾರು ರೀತಿಗಳಿಂದ ನಾವು ಪರಿಶ್ರಮಿಸಬೇಕಾದೀತು.



**ಹಿಂದು ಸಮಾಜಕ್ಕೆ ಕರೆ**

ಕಡೆಯದಾಗಿ ಒಂದು ಮಾತು. ನಾವು ಎದುರಿಸುತ್ತಿರುವ ಸಮಸ್ಯೆ ಬಲು ಗಂಭೀರವಾದುದು. ಇಂದಿನ ದಿನಗಳೂ ಅಷ್ಟೇ. ಸಮಾಜದ ಭವಿಷ್ಯದ ದೃಷ್ಟಿಯಿಂದ ತುಂಬಾ ವಿಪತ್ಕರ ದಿನಗಳಂತೆ ಭಾಸವಾಗುತ್ತದೆ. ಸನ್ನಿವೇಶದ ಈ ಗಂಭೀರತೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳೋಣ. ಆದರೆ ಇದರಿಂದ ಅಂಜಿಕೆ ಪಡುವ ಅಗತ್ಯ ಮಾತ್ರ ಇಲ್ಲ. ನಾವು ವೀರರಾಗಬೇಕು. ಆಪತ್ತುಗಳು ಎದುರಾದಾಗ ಅಳುಕು ಅಂಜಿಕೆಗಳಿಗೆ ಈಡಾಗುವುದು ವೀರನ ಲಕ್ಷಣವಲ್ಲ. ಆಪತ್ತು ಭೀಕರವಾದಷ್ಟೂ ಸ್ಫೂರ್ತಿ ಉಕ್ಕುವುದು ಮತ್ತು ಆ ಆಪತ್ತನ್ನು ಮೆಟ್ಟಿ ನಿಲ್ಲಲು ಸಂಕಲ್ಪಿಸುವುದು ವೀರತ್ವದ ಲಕ್ಷಣ. ನಮ್ಮದು ಇಂದು ನಿನ್ನೆಯ ರಾಷ್ಟ್ರವಲ್ಲ. ಇದರ ಸುದೀರ್ಘ ಜೀವನದಲ್ಲಿ ಎಂಥ ಎಷ್ಟೋ ದುರ್ಭರ ಪ್ರಸಂಗಗಳನ್ನು ಅದು ಎದುರಿಸಿದೆ. ಮೃತ್ಯುವನ್ನು ನುಂಗಿ ಮೃತ್ಯುಂಜಯವಾಗಿ ಮೆರೆದಿದೆ. ವಿವೇಕಾನಂದರು ಹೇಳಿದಂತೆ: "ವಯಂ ಅಮೃತಸ್ಯ ಪುತ್ರಾಃ" – ನಾವು ಅಮೃತಪುತ್ರರು, ಚಿರಂಜೀವಿಗಳು. ಹಿಂದೆ ರಾಷ್ಟ್ರವು ಎದುರಿಸಿದ ಹಲವಾರು ವಿಪತ್ತಿನ ಕ್ಷಣಗಳಲ್ಲಿ ಕೃತಿಶೀಲರಾಗಿ ಮೆರೆದ ಶಿವಾಜಿ, ಗುರು ಗೋವಿಂದ ಸಿಂಹ, ರಾಣಾಪ್ರತಾಪರಂಥ ಅನೇಕ ಪುಣ್ಯ ಪುರುಷರ ಪಾತ್ರವನ್ನೇ ನಾವಿಂದು ನಿರ್ವಹಿಸಬೇಕಾಗಿ ಬಂದಿದೆ. ಇದು ನಮ್ಮ ಜೀವನದ ಸೌಭಾಗ್ಯವೆಂದು ಬಗೆಯೋಣ. ಇಂದಿನ ಸವಾಲಿಗಿಂತಲೂ ಭೀಕರವಾದ ಸವಾಲುಗಳನ್ನು ಎದುರಿಸಿದ ನಮ್ಮ ಜನಾಂಗಕ್ಕೆ ಇದೇನು ಹೊಸದಲ್ಲ. ಇದು ನಮ್ಮ ಕೊರತೆಗಳಿಂದಲೇ ಹುಟ್ಟಿಕೊಂಡಿರುವ ಸವಾಲು. ಈ ಕೊರತೆಗಳಿಂದ ಕಳಚಿಕೊಳ್ಳೋಣ. ಪ್ರೀತಿ, ಸ್ನೇಹ, ಸೋದರತೆ, ಸಮಾನತೆಗಳ ರಸಗಂಗೆಯನ್ನು ಸಮಾಜದಲ್ಲಿ ಹರಿಸಿ ಇಂದು ಒಡಕಿನ ಸ್ಥಿತಿಯಲ್ಲಿರುವ ಸಮಾಜವನ್ನು ಒಂದುಗೂಡಿಸಿದಲ್ಲಿ ಈ ಸವಾಲನ್ನು ನಾವು ಯಶಸ್ವಿಯಾಗಿ ಎದುರಿಸಬಲ್ಲೆವು, ಇತಿಹಾಸಕ್ಕೆ ಹೊಸ ಸುವರ್ಣಪುಟವೊಂದನ್ನು ಜೋಡಿಸಬಲ್ಲೆವು.

## ಬಾಣಲೆಯಿಂದ ಬೆಂಕಿಗೆ ಹಾರಬೇಡಿ

"………ಎಷ್ಟೇ ಮೌಢ್ಯ–ಅವಿವೇಕಗಳು ಇದ್ದರೂ ಹಿಂದು ಮತ ಒಂದು ತೆರೆದ ಮತ (Open Religion). ಆದರೆ ಬೇರೆ ಮತಗಳು ಹಾಗಲ್ಲ. ಅವು ಮುಚ್ಚಿದ ಮತಗಳು (Closed Religions). ಅಲ್ಲಿ ಸುತ್ತ ಬೇಲಿ ಹಾಕಿಬಿಟ್ಟಿದ್ದಾರೆ. ಇಸ್ಲಾಂ ಮತದಲ್ಲಿ ವಿಧೇಯತೆ ಒಂದೇ ಇರೋದು. ಸಂದೇಹ, ಪ್ರಶ್ನೆ, ಚರ್ಚೆ, ಜಿಜ್ಞಾಸೆಗೆ ಆ ಮತ ದಲ್ಲಿ ಅವಕಾಶವೇ ಇಲ್ಲ. ತತ್ವ ಜಿಜ್ಞಾಸೆ ಮಾಡಲಾಗಲಿ ವಿಚಾರಕ್ಕಾಗಲೀ ಸ್ವಾತಂತ್ರ್ಯವೇ ಇಲ್ಲ. ಆದರೆ, ಹಿಂದು ಮತ ಹಾಗಲ್ಲ. ಇಲ್ಲಿ ಬೇಲಿಯೇ ಇಲ್ಲ. ಯಾವ ದನ ಬೇಕಾದರೂ ಬರಬಹುದು. ದೇವರು ಇಲ್ಲ ಎನ್ನುವ ವರಿಗೂ, ಸಂದೇಹ ವ್ಯಕ್ತಮಾಡಿ ಪ್ರಶ್ನೆ ಕೇಳುವವರಿಗೂ ಸ್ವಾತಂತ್ರ್ಯಕ್ಕೆ ಮೇರೆಯೇ ಇಲ್ಲ."

— ರಾಷ್ಟ್ರಕವಿ ಕುವೆಂಪು

## ನಮ್ಮಲ್ಲಿ ದೊರೆಯುವ ಪುಸ್ತಕಗಳು

| | | |
|---|---|---|
| ೧. | ಹಿಂದು ರಾಷ್ಟ್ರ ಏಕೆ ? | ೦–೭೫ |
| ೨. | ರಾ. ಸ್ವ. ಸಂಘಕ್ಕೆ ಜೆಪಿ ಕರೆ | ೦–೪೦ |
| ೩. | ದ್ವಿತೀಯ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯಲ್ಲಿ ರಾ. ಸ್ವ. ಸಂಘ | ೦–೭೫ |
| ೪. | ರಾಷ್ಟ್ರೀಯ ಸ್ವಯಂಸೇವಕ ಸಂಘ : ಸೇವೆಗೆ ಸದಾ ಸಿದ್ಧ | ೦–೭೫ |
| ೫. | ಅಸಾಮಿನ ಆರ್ತಸ್ವರ | ೧–೨೫ |
| ೬. | ಕ್ರೈಸ್ತ ಮಿಶನ್‌ಗಳ ಮೇಲೆ ಗಾಂಧೀಜಿಯವರ 'ಕ್ಷ' ಕಿರಣ | ೦–೮೦ |

ಜಾಗರಣ ಪ್ರಕಾಶನ ಬೆಂಗಳೂರು–೫೬೦೦೧೯